CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೨೮, ೨೦೦೫ (ಶ್ರಾವಣ ೬, ಶಕ ವರ್ಷ ೧೯೨೭) | ಸಂಚಿಕೆ ೩೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಮೆ: ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಯ ಹೆಸರನ್ನು ಮೆ: ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94(3) ದಿನಾಂಕ: 06.09.1994.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ ಭದ್ರಾಎಲ್‌ಬಿಸಿ/ 2005/ 951 ದಿನಾಂಕ: 19/24.05.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಬಳಿ ಭದ್ರಾ ಎಲ್‌ಬಿಸಿಗೆ ಅಡ್ಡಲಾಗಿ 1.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ. ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಯ ಅಭಿವೃದ್ಧಿದಾರರು ಮೆ: ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಹೊಸ ಕಂಪನಿಯನ್ನು ಹುಟ್ಟುಹಾಕಿ ಭದ್ರಾ ಎಲ್‌ಬಿಸಿ ಯೋಜನೆಯನ್ನು ಮೆ: ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 155 ಎನ್‌ಸಿಇ 2005, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ಮೆ: ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಬಳಿ ಭದ್ರಾ ಎಲ್‌ಬಿಸಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 1.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ: ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಡಿಯಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 857

### ಕಾರ್ಮಿಕ ಸಚಿವಾಲಯ

**ವಿಷಯ:** ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿ ವರ್ಗಕ್ಕೆ ಶೇ.70 ರಿಂದ ಶೇ.75ಕ್ಕೆ ಅನುದಾನ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಾಇ 10 ಇಟಿಎ 2005, ದಿನಾಂಕ: 18.05.2005.
2. ಸರ್ಕಾರಿ ಆದೇಶ ಸಂಖ್ಯೆ: ಕಾಇ 126 ಇಟಿಐ 2005, ದಿನಾಂಕ: 10.06.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ಸಹಾಯಾನುದಾನವನ್ನು ಶೇಕಡ 70ರಿಂದ 75ಕ್ಕೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿತ್ತು ಮತ್ತು ರೂ.329.66 (ರೂಪಾಯಿ ಮೂರುನೂರ ಇಪ್ಪತ್ತೊಂಬತ್ತು ಲಕ್ಷದ ಅರವತ್ತಾರು ಸಾವಿರ ಮಾತ್ರ) ಲಕ್ಷಗಳನ್ನು ಪಾವತಿಸಲು ಅದರಲ್ಲಿ ತಿಳಿಸಲಾದ ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯ ವಲಯಕ್ಕೆ ಸಂಬಂಧಪಟ್ಟಂತೆ ಯೋಜನಾ ಕಾರ್ಯಕ್ರಮಗಳಿಗೆ ರೂ.638 ಲಕ್ಷಗಳನ್ನು (ರೂಪಾಯಿ ಆರುನೂರ ಮೂವತ್ತೆಂಟು ಲಕ್ಷಗಳು ಮಾತ್ರ) ಸಂಚಿತ ನಿಧಿಯಿಂದ ನೀಡಲು ಆದೇಶಿಸಲಾಗಿದೆ. ಅದರಲ್ಲಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ಸಹಾಯಾನುದಾನವನ್ನು ನೀಡಲು ರೂ.300.92 (ರೂಪಾಯಿ ಮುನ್ನೂರು ಲಕ್ಷದ ತೊಂಬತ್ತೆರಡು ಸಾವಿರ ಮಾತ್ರ) ಲಕ್ಷಗಳನ್ನು ಸೇರಿಸಿ ಬಿಡುಗಡೆ ಮಾಡಲು ಆದೇಶಿಸಲಾಗಿದೆ. ಆದುದರಿಂದ ಉಲ್ಲೇಖ (1)ರಲ್ಲಿ ಹೊರಡಿಸಲಾದ ಆದೇಶವನ್ನು ಮಾರ್ಪಡಿಸಬೇಕಾಗಿದೆ. ಆ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಇಟಿಎ 2005, ಬೆಂಗಳೂರು, ದಿನಾಂಕ: 23ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ಸಹಾಯಾನುದಾನವನ್ನು ಶೇ.70 ರಿಂದ 75ಕ್ಕೆ ಹೆಚ್ಚಿಸಲು ಮಾತ್ರ ಅನುಮತಿ ನೀಡಲಾಗಿದೆ. ಹಾಗೂ ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಕಾಇ 10 ಇ.ಟಿ.ಎ. 2005 ದಿನಾಂಕ: 18.05.2005ನ್ನು ಮಾರ್ಪಡಿಸಲಾಗಿದೆ.

ಇದನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ. 360 ವೆಚ್ಚ 9/2005 ದಿನಾಂಕ: 18.06.2005ರೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪಿ.ಆರ್. 859

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಡಿ.ಬಿ. ಚಂದ್ರಶೇಖರಪ್ಪ, ಹಿಂದಿನ ತಹಶೀಲ್ದಾರ್, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ (ಪ್ರಸ್ತುತ ನಿವೃತ್ತ) ಇವರ ವಿರುದ್ಧ ಶಿಸ್ತು ಕ್ರಮ ಕುರಿತು.

**ಓದಲಾಗಿದೆ:**
1. ಶಿವಮೊಗ್ಗ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಸಿಬ್ಬಂದಿ (3) ವಿವ 4:2004-05, ದಿನಾಂಕ: 14.09.2004.
2. ದಿನಾಂಕ: 19.01.2005ರಂದು ನೀಡಿರುವ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 25 ಎಡಿಇ 2004.
3. ದಿನಾಂಕ: 29.01.2005ರಂದು ಆರೋಪಿತ ಅಧಿಕಾರಿಯವರು ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರ.
4. ದಿನಾಂಕ: 30.03.2005ರಂದು ಶಿವಮೊಗ್ಗ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಕಂಇ 25 ಎಡಿಇ 2004.
5. ದಿನಾಂಕ: 18.04.2005 ರಂದು ಶಿವಮೊಗ್ಗ ಜಿಲ್ಲಾಧಿಕಾರಿಗಳು ನೀಡಿರುವ ವರದಿ ಸಂಖ್ಯೆ: ಸಿಬ್ಬಂದಿ (3) ವಿವ 4:2004-05.

**ಪ್ರಸ್ತಾವನೆ:**

ಶ್ರೀ ಚಂದ್ರಶೇಖರಪ್ಪ, ಹಿಂದಿನ ತಹಶೀಲ್ದಾರ್, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ (ಪ್ರಸ್ತುತ ನಿವೃತ್ತ) ಇವರು ಕಛೇರಿಯಲ್ಲಿ ಅಸಮರ್ಪಕವಾಗಿ ಕಾರ್ಯನಿರ್ವಹಿಸಿ ಆರ್.ಆರ್. ವಿಭಾಗದ ಕಾರ್ಯನಿರ್ವಾಹಕ ಹಾಗೂ ಶಾಖೆಯ ಬಾಕಿ ಪ್ರಕರಣಗಳ ಕುರಿತಂತೆ ಯಾವುದೇ ಕ್ರಮ ಕೈಗೊಳ್ಳದೆ ಬೇಜವಾಬ್ದಾರಿತನದಿಂದ ವರ್ತಿಸಿ, ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ, ವಿಳಂಬ ಎಸಗಿರುವುದರಿಂದ ಹಾಗೂ ಮಾನ್ಯ ಕರ್ನಾಟಕ ಲೋಕಾಯುಕ್ತರು ಶಿವಮೊಗ್ಗ ಜಿಲ್ಲೆಗೆ ಭೇಟಿ ನೀಡಿದಾಗ, ಶಿವಮೊಗ್ಗ ಉಪ ವಿಭಾಗಾಧಿಕಾರಿಗಳಿಂದ ಮಂಜೂರಾದ ಪ್ರಕೃತಿ ವಿಕೋಪದ ಪರಿಹಾರ ಹಣವನ್ನು ಫಲಾನುಭವಿಗಳಿಗೆ ಸಕಾಲದಲ್ಲಿ ಪಾವತಿಸದೆ ವಿಳಂಬ ಉಂಟಾಗಿರುವುದು ಕಂಡು ಬಂದಿದ್ದರಿಂದ ಹಾಗೂ ಇನ್ನಿತರೆ ಆರೋಪಗಳ ಮೇರೆಗೆ ಸದರಿ ತಹಶೀಲ್ದಾರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 14.09.2004ರ ಪತ್ರದಲ್ಲಿ ಶಿವಮೊಗ್ಗ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಅಂತೆಯೇ ಆರೋಪಿತ ತಹಶೀಲ್ದಾರರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 19.01.2005ರಂದು ಕಾರಣ ಕೇಳುವ ನೋಟೀಸನ್ನು ನೀಡಲಾಗಿ, ಅದಕ್ಕೆ ಅವರು ಲಿಖಿತ ಸಮಜಾಯಿಷಿಯನ್ನು ದಿನಾಂಕ: 29.01.2005ರಂದು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ನೀಡಿರುತ್ತಾರೆ. ಎಲ್ಲಾ ಆರೋಪಗಳನ್ನು ಅಲ್ಲಗಳೆಯುತ್ತಾ ತಾವು ನಿವೃತ್ತಿ ಅಂಚಿನಲ್ಲಿರುವುದರಿಂದ ತಮ್ಮ ವಿರುದ್ಧ ಹೂಡಲು ಉದ್ದೇಶಿಸಿರುವ ಇಲಾಖಾ ವಿಚಾರಣೆ ಪ್ರಕರಣವನ್ನು ಮುಕ್ತಾಯ ಮಾಡುವಂತೆ ಕೋರಿರುತ್ತಾರೆ. ಆರೋಪಿತ ತಹಶೀಲ್ದಾರರು ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರದ ಬಗ್ಗೆ ಅಭಿಪ್ರಾಯ ನೀಡುವಂತೆ ಶಿವಮೊಗ್ಗ ಜಿಲ್ಲಾಧಿಕಾರಿಗಳಿಗೆ ಮೇಲೆ ಓದಲಾದ ದಿನಾಂಕ: 30.03.2005ರ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕೋರಲಾಗಿ, ಶಿವಮೊಗ್ಗ ಜಿಲ್ಲಾಧಿಕಾರಿಗಳು ದಿನಾಂಕ: 18.04.2005ರ ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಆರೋಪಿತ ತಹಶೀಲ್ದಾರರು ಆಪಾದನೆಗಳನ್ನು ತಿರಸ್ಕರಿಸಿ ಸಲ್ಲಿಸಿರುವ ಉತ್ತರವು ಸಮಂಜಸವಾಗಿರುವುದಿಲ್ಲ ಹಾಗೂ ಅವುಗಳನ್ನು ಒಪ್ಪಲು ಸಾಧ್ಯವಿರುವುದಿಲ್ಲವೆಂದು ತಿಳಿಸುತ್ತಾ, ಆದಾಗ್ಯೂ ಸದರಿ ಅಧಿಕಾರಿಯ ವಿರುದ್ಧ ಪ್ರಸ್ತಾಪಿಸಿರುವ ಶಿಸ್ತು ಕ್ರಮವು ಅವರನ್ನು ಮುಂದೆ ಶಿಸ್ತುಬದ್ಧವಾಗಿರಲು ಮತ್ತು ಅವರನ್ನು ಆಡಳಿತಾತ್ಮಕವಾಗಿ ಸುಧಾರಣೆ ತರಲು ಉದ್ದೇಶಿಸಿ ಕ್ರಮಕೈಗೊಂಡಿರುವುದಾಗಿ ವರದಿ ನೀಡಿರುತ್ತಾರೆ. ಸದರಿ ಅಧಿಕಾರಿಯು ನಿವೃತ್ತಿ ಅಂಚಿನಲ್ಲಿರುವುದರಿಂದ ಹಾಗೂ ಅವರ ವಿರುದ್ಧದ ಆಪಾದನೆಗಳಲ್ಲಿ ಸರ್ಕಾರಕ್ಕೆ ಆರ್ಥಿಕ ನಷ್ಟವಾಗಿರುವ ಮತ್ತು ಹಣ ದುರುಪಯೋಗದಂತಹ ಅಂಶಗಳು ಇರುವುದಿಲ್ಲವಾದ್ದರಿಂದ, ಮಾನವೀಯತೆ ದೃಷ್ಟಿಯಿಂದ ಆರೋಪಿತ ಅಧಿಕಾರಿಯ ವಿರುದ್ಧದ ಪ್ರಸ್ತಾಪಿತ ಶಿಸ್ತು ಕ್ರಮವನ್ನು ಕೈಬಿಟ್ಟು, ಅವರಿಗೆ ಸೂಕ್ತ ಎಚ್ಚರಿಕೆ ನೀಡಬಹುದಾಗಿದೆಯೆಂದು ಅಭಿಪ್ರಾಯ ಪಟ್ಟಿದ್ದಾರೆ.

ಶಿವಮೊಗ್ಗ ಜಿಲ್ಲಾಧಿಕಾರಿಗಳು ನೀಡಿರುವ ವರದಿಯನ್ನು ಪರಿಶೀಲಿಸಿ ಹಾಗೂ ಅವರು ನೀಡಿರುವ ಅಭಿಪ್ರಾಯವನ್ನು ಒಪ್ಪಿಕೊಂಡು ಶ್ರೀ ಡಿ.ಬಿ. ಚಂದ್ರಶೇಖರಪ್ಪ, ಹಿಂದಿನ ತಹಶೀಲ್ದಾರ್, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಹಾಲಿ ನಿವೃತ್ತರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 25 ಎಡಿಇ 04, ಬೆಂಗಳೂರು, ದಿನಾಂಕ: 14ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಡಿ.ಬಿ. ಚಂದ್ರಶೇಖರಪ್ಪ, ಹಿಂದಿನ ತಹಶೀಲ್ದಾರ್, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಹಾಲಿ ನಿವೃತ್ತರು ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ, ಶ್ರೀ ಡಿ.ಬಿ. ಚಂದ್ರಶೇಖರಪ್ಪ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 866

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ:ಸಿ.ಆರ್.ವೇದ, ವಿಮಾ ವೈದ್ಯಾಧಿಕಾರಿ ಇವರ ಅನಧಿಕೃತ ಗೈರುಹಾಜರಾತಿ – ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ.

**ಉಲ್ಲೇಖ:**
1. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ಇವಿ/43/03–04, ದಿ:24–03–2004.
2. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 220, ಎಲ್ಎಸ್ಐ 04, ದಿ:07–05–04.
3. ಡಾ: ಸಿ.ಆರ್.ವೇದ, ವಿ.ವೈ, ಇವರ ರಕ್ಷಣಾ ಹೇಳಿಕೆ ದಿ:29–05–04.
4. ಸರ್ಕಾರಿ ಆದೇಶ ಸಂಖ್ಯೆ: ಕಾಇ 220 ಎಲ್ಎಸ್ಐ 04, ದಿ:06–09–04.
5. ವಿಚಾರಣಾಧಿಕಾರಿಗಳ ದಿ:17–01–2005ರ ವರದಿ.
6. 2ನೇ ಕಾರಣ ಕೇಳುವ ನೋಟೀಸ್ ಕಾಇ 220, ಎಲ್ಎಸ್ಐ 04, ದಿ:31–03–05.
7. ಡಾ: ಸಿ.ಆರ್.ವೇದ, ವಿ.ವೈ ಇವರ ದಿ:25–04–05ರ ಹೇಳಿಕೆ.

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (1)ರಲ್ಲಿ ಓದಲಾದ ದಿ:24–03–2004ರ ತಮ್ಮ ಪತ್ರದಲ್ಲಿ ಡಾ:ಸಿ.ಆರ್.ವೇದ, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ರಾಜಾಜಿನಗರ–2 ಇವರು ದಿ:01–08–2002 ರಿಂದ 08–09–2002ರವರೆಗೆ ಅರ್ಧ ವೇತನ ರಜೆ ಹಾಗೂ ದಿ:14–09–2002 ರಿಂದ 08–12–2002ರವರೆಗೆ ಅರ್ಧವೇತನ ರಜೆ ಮತ್ತು ಗಳಿಕೆ ರಜೆಗಳನ್ನು ಹಾಗೂ ದಿ:22–12–02 ರಿಂದ 17–03–2003ರವರೆಗೆ ಅಸಾಧಾರಣ ರಜೆಗಳನ್ನು ಗೃಹಕೃತ್ಯದ ಕಾರಣಗಳಿಂದ ಮಂಜೂರುಗೊಳಿಸುವಂತೆ ಕೋರಿ ರಜಾ ಅರ್ಜಿ ಸಲ್ಲಿಸಿದ್ದು, ಆನಂತರ ದಿ:12–04–2003 ರಿಂದ ಯಾವುದೇ ರಜೆ ಅರ್ಜಿಗಳನ್ನಾಗಲೀ ಅಥವಾ ಮನವಿಗಳನ್ನಾಗಲೀ ಸಲ್ಲಿಸದೇ ಕರ್ತವ್ಯದಿಂದ ಅನಧಿಕೃತವಾಗಿ ಸೇವೆಗೆ ಗೈರು ಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ಸದರಿ ವೈದ್ಯರಿಗೆ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಹಲವಾರು ಸೂಚನಾ ಪತ್ರಗಳನ್ನು ಜಾರಿ ಮಾಡಿದ್ದರೂ ಸಹ ಅವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದೂ ಆದ್ದರಿಂದ ಅವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸುವಂತೆ ಕೋರಿದ್ದರು. ಡಾ: ಸಿ.ಆರ್.ವೇದ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿ:07–05–2004ರ ಷೋಕಾಸ್ ನೋಟೀಸಿನೊಂದಿಗೆ ದೋಷಾರೋಪಣ ಪಟ್ಟಿಯನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಈ ನೋಟೀಸು ತಲುಪಿದ 15 ದಿನಗಳೊಳಗಾಗಿ ಲಿಖಿತ ಮೂಲಕ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು. ಮೇಲೆ (3)ರಲ್ಲಿ ಓದಲಾದ ದಿ:29–05–04ರ ತಮ್ಮ ರಕ್ಷಣಾ ಹೇಳಿಕೆಯಲ್ಲಿ ಡಾ:ಸಿ.ಆರ್.ವೇದ, ವಿಮಾ ವೈದ್ಯಾಧಿಕಾರಿ, ಇವರು ತಾವು ಸೇವೆಗೆ ಹಾಜರಾಗದಿರಲು ಕೌಟುಂಬಿಕ ಸಮಸ್ಯೆಗಳು ಕಾರಣವೆಂದು ತಿಳಿಸಿ ಈ ಅವಧಿಯನ್ನು ವೇತನರಹಿತ ರಜೆ ಎಂದು ಪರಿಗಣಿಸಲು ಕೋರಿರುತ್ತಾರೆ.

ಡಾ:ಸಿ.ಆರ್.ವೇದ, ವಿಮಾ ವೈದ್ಯಾಧಿಕಾರಿ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಅನುಸಾರ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಡಿ.ವೆಂಕಟರಾಮಯ್ಯ, ಪ್ರಥಮ ದರ್ಜೆ ಸಹಾಯಕರು, ಕಾರಾವಿ ನಿರ್ದೇಶನಾಲಯ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು ಹಾಗೂ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ವಿಧಿ ವಿಧಾನಗಳನುಸಾರ ಜರುಗಿಸಿ ವಿಚಾರಣಾ ವರದಿಯನ್ನು 3 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದೆಂದು ಆದೇಶಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು ಡಾ:ಸಿ.ಆರ್.ವೇದ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿ ದಿನಾಂಕ:17–01–2005ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ಆಪಾದಿತರು ತಮ್ಮ ಗೈರು ಹಾಜರಾತಿಯನ್ನು ಒಪ್ಪಿಕೊಂಡಿರುವುದಾಗಿಯೂ ಫಿರ್ಯಾದುದಾರರು ಹಾಜರುಪಡಿಸಿರುವ ಸಾಕ್ಷಿ ಪುರಾವೆಗಳ ಬಗ್ಗೆ ಯಾವುದೇ ತರಹದ ಅನುಮಾನ ಇಲ್ಲದೆ ಇರುವುದರಿಂದ ಆಪಾದಿತರು ದಿನಾಂಕ:01–08–2002 ರಿಂದ 08–09–2002, ದಿನಾಂಕ:14–09–2002 ರಿಂದ 08–12–2002, ದಿನಾಂಕ:22–12–2002 ರಿಂದ 17–03–2003 ಮತ್ತು 12–04–2003 ರಿಂದ ತಹಲ್‌ವರೆವಿಗೆ ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾಗಿರುವುದು ರುಜುವಾತಾಗಿದೆಯೆಂದು ನಿರ್ಣಯಿಸಿರುತ್ತಾರೆ. ಅಲ್ಲದೆ ತಮ್ಮ ವರದಿಯಲ್ಲಿ ವಿವರಿಸಿರುವ ಕಾರಣಗಳಿಂದ ಆಪಾದಿತರ ಮೇಲೆ ಮಾಡಿರುವ ದೋಷಾರೋಪಗಳು ಸಾಬೀತಾಗಿದೆ ಎಂದು ನಿರ್ಧರಿಸಿ ಆಪಾದಿತರು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಎಸಗಿರುತ್ತಾರೆಂದು, ಇದರಿಂದ ಚಿಕಿತ್ಸಾಲಯದ ಕೆಲಸಕಾರ್ಯಗಳಲ್ಲಿ ಅಡಚಣೆ ಉಂಟಾಗಿದ್ದು ತೊಂದರೆಯಾಗಿರುತ್ತದೆಂದೂ ತೀರ್ಮಾನಿಸಿದ್ದಾರೆ.

ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದೆಂಬ ಬಗ್ಗೆ ತಮ್ಮ ಅಹವಾಲೇನಾದರೂ ಸಲ್ಲಿಸುವುದಿದ್ದರೆ ನೋಟೀಸ್ ತಲುಪಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿ ಮೇಲೆ (6)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸನ್ನು ಆಪಾದಿತ ಸರ್ಕಾರಿ ನೌಕರರಿಗೆ ಜಾರಿ ಮಾಡಲಾಗಿತ್ತು. ಡಾ:ಸಿ.ಆರ್.ವೇದ ಇವರು ಮೇಲೆ (7)ರಲ್ಲಿ ಓದಲಾದ ದಿನಾಂಕ:25-04-2005ರ ತಮ್ಮ ರಕ್ಷಣಾ ಹೇಳಿಕೆಯಲ್ಲಿ ತಾವು ದಿನಾಂಕ:01-08-2002 ರಿಂದ 08-09-2002, 14-09-2002 ರಿಂದ 08-12-2002, ದಿ: 22-12-2002 ರಿಂದ 17-03-2003ರ ವರೆಗಿನ ಅವಧಿಗೆ ರಜೆ ಅರ್ಜಿಯನ್ನು ಸಲ್ಲಿಸಿದ್ದು ಇದನ್ನು ಅನಧಿಕೃತ ಗೈರುಹಾಜರಾತಿಯೆಂದು ಪರಿಗಣಿಸುವುದು ಸರಿಯಲ್ಲವೆಂದು ರಜೆ ಮಂಜೂರು ಮಾಡುವ ಅಧಿಕಾರಿ ರಜೆಯನ್ನು ಮಂಜೂರು ಮಾಡದೇ ಇರುವ ವಿಷಯವನ್ನು ತಮಗೆ ತಿಳಿಸಿಲ್ಲವೆಂದು ತಾವು ಮಹಾರಾಷ್ಟ್ರ ಸರ್ಕಾರಕ್ಕೆ ತಮ್ಮನ್ನು ನಿಯೋಜನೆ ಮಾಡುವಂತೆ ಕೋರಿದ ಅರ್ಜಿಯನ್ನು ತಿರಸ್ಕರಿಸಿದ್ದಲ್ಲಿ ತಾವು ಕರ್ತವ್ಯಕ್ಕೆ ಹಾಜರಾಗುತ್ತಿದ್ದುದಾಗಿಯೂ ಆದ್ದರಿಂದ ತಮ್ಮ ವಿರುದ್ಧ ವಿಚಾರಣಾ ವರದಿಯಲ್ಲಿ ಮಾಡಲಾಗಿರುವ ಆರೋಪವನ್ನು ತಳ್ಳಿಹಾಕಿ ತಮ್ಮನ್ನು ದೋಷಾರೋಪಗಳಿಂದ ವಿಮುಕ್ತಿಗೊಳಿಸಿ ತಮಗೆ ರಜೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಡಾ:ಸಿ.ಆರ್.ವೇದ ಇವರು ವಿಚಾರಣೆ ವರದಿಯಲ್ಲಿನ ಅಂಶಗಳನ್ನು ಒಪ್ಪದಿರಲು ನೀಡಿರುವ ಕಾರಣಗಳು ಸಮರ್ಥನೀಯವಾಗಿಲ್ಲ. ಸದರಿ ವೈದ್ಯರಿಗೆ ಇವರು ಸಲ್ಲಿಸಿದ್ದ ಎಲ್ಲಾ ರಜೆ ಅರ್ಜಿಯನ್ನು ರದ್ದುಪಡಿಸಿ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚನಾ ಪತ್ರಗಳನ್ನು ಕಾರಾವಿ ಯೋ (ವೈ) ಸೇವೆಗಳು ನಿರ್ದೇಶನಾಲಯದಿಂದ ದಿನಾಂಕ:4/10-03-2003ರಲ್ಲಿ ಹೊರಡಿಸಲಾಗಿದೆ. ಅಲ್ಲದೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ದಿನಾಂಕ:19-03-2003, 16-07-2003, 13-08-2003 ಮತ್ತು 16-05-2004ರಂದೂ ಸಹ ಸೂಚನಾ ಪತ್ರಗಳನ್ನು ಹೊರಡಿಸಲಾಗಿದೆ. ಅಲ್ಲದೇ ತಮ್ಮ ಹೇಳಿಕೆಯಲ್ಲಿ ಡಾ:ವೇದರವರೇ ಒಪ್ಪಿಕೊಂಡಿರುವಂತೆ ಕೌಟುಂಬಿಕ ಕಾರಣಗಳಿಂದಾಗಿ ಹಾಗೂ ಮಹಾರಾಷ್ಟ್ರ ಸರ್ಕಾರಕ್ಕೆ ನಿಯೋಜನೆ ಹೊಂದುವ ಉದ್ದೇಶದಿಂದಾಗಿ ಇವರು ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ವಿಚಾರಣಾಧಿಕಾರಿಯವರ ವರದಿಯಿಂದ ಇವರ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳು ಪೂರ್ಣವಾಗಿ ಸಾಬೀತಾಗಿದೆ. ಆದ್ದರಿಂದ ಸದರಿ ವೈದ್ಯರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರನುಸಾರ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 220 ಎಲ್‌ಎಸ್‌ಐ 2004, ಬೆಂಗಳೂರು, ದಿನಾಂಕ: 7ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಡಾ:ಸಿ.ಆರ್.ವೇದ, ವಿಮಾ ವೈದ್ಯಾಧಿಕಾರಿ, ಕಾರಾವಿ ಯೋ (ವೈ) ಸೇವೆಗಳು ಇಲಾಖೆ ಇವರು ದಿನಾಂಕ:01-08-2002 ರಿಂದ 08-09-2002, ದಿನಾಂಕ:14-09-2002 ರಿಂದ 08-12-2002, ದಿನಾಂಕ:22-12-2002 ರಿಂದ 17-03-2003ರವರೆಗೆ ಸಲ್ಲಿಸಿರುವ ರಜೆ ಅರ್ಜಿಗಳಿಗೆ ಸಕ್ಷಮ ಪ್ರಾಧಿಕಾರಿಗಳಿಂದ ರಜೆ ಮಂಜೂರಾಗದೆ ಅಥವಾ ಪೂರ್ವಾನುಮತಿ ಇಲ್ಲದೆ ಮತ್ತು ದಿ:12-04-2003 ರಿಂದ ತಹಲ್‌ವರೆವಿಗೆ ಯಾವುದೇ ರಜೆ ಅರ್ಜಿ ಸಲ್ಲಿಸದೆ ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾಗಿರುವ ಆರೋಪ ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು ನಿಯಮ 108ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರನುಸಾರ ಸರ್ಕಾರಿ ಸೇವೆಯಿಂದ ವಜಾಮಾಡುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ವಿಶ್ವನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ.

ಪಿ.ಆರ್. 858

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀಮತಿ ರಶೀದಾಬೇಗಂ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಪಾಂಡವಪುರ, ಇವರ ಮೇಲ್ಮನವಿ ಅರ್ಜಿ ಬಗ್ಗೆ- ಆದೇಶ ಕುರಿತು.

**ಓದಲಾಗಿದೆ :** 1. ನಿರ್ದೇಶಕರ ಆದೇಶ ಸಂ.ಮಮಅಇ/ಸಿಬ್ಬಂದಿ/ಶಿಕ್ರ/41/96-97, ದಿನಾಂಕ:19-9-2002.

2. ಶ್ರೀಮತಿ ರಶೀದಾ ಬೇಗಂ ಇವರ ಅಪೀಲು ದಿ:10-12-2002

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ:[1] ರ ದಿ:19-9-2002ರ ಆದೇಶದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಶ್ರೀಮತಿ ರಶೀದಾ ಬೇಗಂ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಪಾಂಡವಪುರ ಇವರ ಮೇಲಿನ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾದ ಕಾರಣ, ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ] ನಿಯಮಾವಳಿ 1957ರ ನಿಯಮ 9[2] [ಸಿ] ರಲ್ಲಿ ನಿರ್ದೇಶಕರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ನಿಯಮಾವಳಿಗಳ ನಿಯಮ 8[4][ಎ]ರನ್ವಯ ಅವರ ಹುದ್ದೆಯ ಕಾಲಮಿತಿ ವೇತನ ಶ್ರೇಣಿಯಲ್ಲಿ [ರೂ.3050-7050] ಮೂರು ವರ್ಷದವರೆಗೆ ಕನಿಷ್ಟ ವೇತನಕ್ಕೆ ಇಳಿಸುವ ದಂಡನೆಯನ್ನು ಈ ಕೆಳಗಿನ ಷರತ್ತುಗಳಿಗೆ ಅನುಗುಣವಾಗಿ ವಿಧಿಸಿ ಇದೇ ನಿಯಮಾವಳಿಯ ನಿಯಮ 8[4] ರಂತೆ ನೌಕರರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ ರೂ.6000/- ಅನ್ನು ವಸೂಲಾತಿ ಮಾಡಲು ಹಾಗೂ ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದು ದಂಡನೆ ವಿಧಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂ[2] ರ ದಿ:10-12-2002ರಲ್ಲಿ ಶ್ರೀಮತಿ ರಶೀದಾಬೇಗಂ, ಮೇಲ್ವಿಚಾರಕಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ ಪಾಂಡವಪುರ, ಇವರು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಆದೇಶ ದಿ:19-9-2002ರ ವಿರುದ್ಧ ಅಪೀಲು ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿ, ಹಿಂದೆ ನಾಗಮಂಗಲದಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಲ್ಲಿ 1985-86ನೇ ಸಾಲಿನಲ್ಲಿ ತಾವು ಮೇಲ್ವಿಚಾರಕಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ತಮ್ಮ ಮೇಲೆ ಕೆಲವು ಆರೋಪಗಳನ್ನು ಮಾಡಿ ಕೆ.ಸಿ.ಎಸ್(ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 11 ರ ಅಡಿ ದಿ:7-10-1987 ರಂದು ಕಾರಣ ಕೇಳುವ ನೋಟೀಸನ್ನು ನೀಡಿರುತ್ತಾರೆ. ಈ ಪ್ರಕರಣವಾಗಿ ಸುಮಾರು 15 ವರ್ಷಗಳ ನಂತರ ಇಲಾಖಾ ವಿಚಾರಣಾಧಿಕಾರಿಗಳನ್ನು ನೇಮಿಸಿ ದಿನಾಂಕ:2-9-97 ರಂದು ವಿಚಾರಣೆ ನಡೆಸಿರುತ್ತಾರೆ ಸದರಿ ವಿಚಾರಣಾಧಿಕಾರಿಗಳು ದಿ:21-1-2001 ರಂದು ಸರ್ಕಾರಕ್ಕೆ ವರದಿ ಸಲ್ಲಿಸಿದ್ದು, ವಿಚಾರಣೆಯ ಸಂದರ್ಭದಲ್ಲಿ ಅವರ ಮೇಲಿನ 5 ಆರೋಪಗಳಲ್ಲಿ 4 ಆರೋಪಗಳು ಸಾಬೀತಾಗಿದ್ದು, ಒಂದು ಆರೋಪ

ಸಾಬೀತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ಮೇಲಿನ ಆರೋಪಗಳು ಆಧಾರ ರಹಿತ ಹಾಗೂ ನಿಯಮಬಾಹಿರವಾಗಿರುತ್ತದೆ. ಇದರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆಯ ಸಂದರ್ಭದಲ್ಲಿ ಯಾವುದೇ ಹೇಳಿಕೆ ನೀಡಲು ಮುಕ್ತ ಅವಕಾಶ ನೀಡದೇ ನಿರಾಧಾರವಾಗಿ ತಮ್ಮ ಮೇಲೆ ಆರೋಪಗಳನ್ನು ಹೊರಿಸಿರುತ್ತಾರೆ. ಆದ್ದರಿಂದ ಸದರಿ ಆರೋಪಗಳನ್ನು ಕೈಬಿಟ್ಟು ತಮ್ಮ ಮೇಲ್ಮನವಿಯನ್ನು ಪುರಸ್ಕರಿಸಿ ತಮ್ಮ ಮೇಲಿನ ಆಪಾದನೆಗಳನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಶ್ರೀಮತಿ ರಶೀದಾಬೇಗಂ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಪಾಂಡವಪುರ ಇವರು ಈ ಹಿಂದೆ ನಾಗಮಂಗಲದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಇವರ ಮೇಲಿನ 5 ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲಾಗಿ 5 ಆರೋಪಗಳ ಪೈಕಿ 4 ಆರೋಪಗಳು ಸಾಬೀತಾಗಿದ್ದು ವಿವರಗಳು ಈ ಕೆಳಕಂಡಂತಿರುತ್ತವೆ:–

**ಆರೋಪ–1** ಶ್ರೀಮತಿ ರಶೀದಾಬೇಗಂ, ಮೇಲ್ವಿಚಾರಕಿ, ಬೆಳ್ಳೂರು ಇಲಾಖೆ ವ್ಯಾಪ್ತಿಗೆ ಬರುವ ಅಂಗನವಾಡಿ ಕೇಂದ್ರ ಸಂಖ್ಯೆ–3 ಕ್ಕೆ ಸಂಬಂಧಿಸಿದಂತೆ, ಮರಿಗೌಡ ತಂದೆ ಬಿನ್ ಬ್ಯಾಟಪ್ಪ ಇವರಿಗೆ ಸೇರಿದ ಅಂಗನವಾಡಿ ಕೇಂದ್ರಕ್ಕೆ ರೂ.100ರಂತೆ ಬಾಡಿಗೆ ಕರಾರು ಆಗಿದ್ದು, ಬ್ಯಾಟಪ್ಪ ಅವರು ತುಂಬಾ ವರ್ಷಗಳ ಹಿಂದೆಯೇ ನಿಧನ ಹೊಂದಿದ್ದರೂ ಸಹ ಇವರ ಹೆಸರಿಗೆ ರೂ.50/– ರಶೀದಿ ನೀಡಿ ಫೋರ್ಜರಿ ಸಹಿ ಮಾಡಿರುವುದು ಸಾಕ್ಷ್ಯಾಧಾರಗಳಿಂದ ರುಜುವಾತಾಗಿರುತ್ತದೆ. ಈ ಆರೋಪದ ಬಗ್ಗೆ ವಿಚಾರಣಾಧಿಕಾರಿಗಳ ವರದಿಯು ಸ್ಪಷ್ಟವಾಗಿದ್ದು, ಆರೋಪಿತ ನೌಕರರು ರಕ್ಷಣಾ ಹೇಳಿಕೆಯಲ್ಲಿ ತಿಳಿಸಿರುವುದು ಒಪ್ಪಲಾಗುವುದಿಲ್ಲ. ಸರ್ಕಾರದ ಹಣ ದುರುಪಯೋಗ ಪಡಿಸಿಕೊಂಡಿರುವುದು ಸಾಬೀತಾಗಿರುತ್ತದೆ.

**ಆರೋಪ–2** ಬೆಳ್ಳೂರು ಪುರಸಭಾ ಅಂಗನವಾಡಿ ಕೇಂದ್ರ ಸಂಖ್ಯೆ–5ನ್ನು ನಡೆಸಲು ನಿಂಗೇಗೌಡ ಎಂಬುವರ ಕಟ್ಟಡವನ್ನು ದಿನಾಂಕ:1–5–85ರಿಂದ 30–6–86 ರವರೆಗೆ ತಿಂಗಳಿಗೆ ರೂ. 100/ರಂತೆ ಬಾಡಿಗೆ ಪಾವತಿಸಲು ಮನೆ ಮಾಲೀಕರಾದ ನಿಂಗೇಗೌಡ ರವರಿಂದ ಚೆಕ್ ಮೂಲಕ ರೂ. 1,400 ಗಳನ್ನು ಪಾವತಿಸಲಾಗುತ್ತಿದೆ. ಈ ಆರೋಪದ ಬಗ್ಗೆ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಆರೋಪಿತ ನೌಕರರು ಹಣ ದುರುಪಯೋಗ ಪಡಿಸಿಕೊಂಡಿರುವುದು ಸ್ಪಷ್ಟವಾಗಿರುತ್ತದೆ. ಶೇಷಾದ್ರಿ ಎಂಬುವವರ ಕಟ್ಟಡದಲ್ಲಿ ದಿ:1–4–85 ರಿಂದ 30–11–85ರವರೆಗೆ ಹಾಗೂ ದಿ:10–2–86 ರಿಂದ 30–6–86 ರವರೆಗೆ ನಿಂಗೇಗೌಡ ರವರ ಕಟ್ಟಡದಲ್ಲಿ ಹಾಗೂ ದಿ:1–12–85 ರಿಂದ 9–2–86 ರವರೆಗೆ 2 ತಿಂಗಳು ಬಾಲಕಿಯರ ವಸತಿ ನಿಲಯದಲ್ಲಿ ಬಾಡಿಗೆ ರಹಿತವಾಗಿ ನಡೆದಿದೆ. ಈ ಸಂಬಂಧದಲ್ಲಿ ಬಾಡಿಗೆಗೆ ಮೊತ್ತವನ್ನು ನಿಂಗೇಗೌಡರ ಹೆಸರಿನಲ್ಲಿ ರಶೀದಿ ಸಲ್ಲಿಸಿ ಶಿಶು ಅಭಿವೃದ್ಧಿ ಯೋಜನಾ ಕಛೇರಿಯಿಂದ ರೂ.1,400/– ಗಳ ಡಿಡಿ ನಿಂಗೇಗೌಡರ ಹೆಸರಿಗೆ ಹೋಗಿರುವುದಾಗಿ ಕೇಂದ್ರ ಕಟ್ಟಡದಲ್ಲಿ ನಡೆದ ಅವಧಿಗೆ ಬಾಡಿಗೆ ರಶೀದಿ ಸೃಷ್ಟಿಸಿರುವುದು, ರೂ, 900/– ಗಳನ್ನು ನಿಂಗೇಗೌಡರಿಂದ ಪಡೆದು ಶೇಷಾದ್ರಿ ಅವರಿಗೆ ರೂ,300/–ಗಳನ್ನು ನೀಡಿ ರೂ.600/–ಗಳನ್ನು ಸ್ವಂತಕ್ಕೆ ಬಳಸಿರುವುದು ವಿಚಾರಣಾಧಿಕಾರಿಗಳ ವರದಿಗಳನ್ನು ಪರಿಶೀಲಿಸಲಾಗಿ ಆರೋಪವು ಸಾಬೀತಾಗಿರುವುದು ಸ್ಪಷ್ಟವಾಗಿರುತ್ತದೆ.

**ಆರೋಪ–3** ಸಹಾಯಕ ನಿರ್ದೇಶಕರು, ಮಂಡ್ಯ ಇವರು ಆರೋಪಿತ ನೌಕರರನ್ನು ಸಾರ್ವಜನಿಕ ದೃಷ್ಟಿಯಿಂದ ಬೆಳ್ಳೂರಿನಿಂದ ದೇವಲಾಪುರಕ್ಕೆ ವರ್ಗಾಯಿಸಿದ್ದು, ವರ್ಗಾವಣೆ ಆದೇಶವನ್ನು ಆರೋಪಿತ ನೌಕರರು ಸ್ವೀಕರಿಸಿದ ಕಛೇರಿಗೆ ಅನಧಿಕೃತ ಗೈರು ಹಾಜರಾಗಿ ಅಧಿಕಾರಿಗಳ ವಿರುದ್ಧ ನೇರವಾಗಿ ಜಿಲ್ಲಾಧಿಕಾರಿಗಳಿಗೆ ದೂರು ನೀಡಿ, ಉದ್ದಟತನದಿಂದ ವರ್ತಿಸಿದ್ದಾರೆ ಎಂಬುದರ ಬಗ್ಗೆ ವಿಚಾರಣಾಧಿಕಾರಿಗಳ ವರದಿಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಬದಲಾವಣೆ ಮಾಡಿರುವುದು ಸೂಕ್ತವಾಗಿದೆ ಎಂದು ತಿಳಿಸಿದ್ದಾರೆ ಹಾಗೂ ಆರೋಪಿತ ನೌಕರರು ಉದ್ದಟತನದಿಂದ ವರ್ತಿಸಿದ್ದಾರೆ ಎಂಬುದಕ್ಕೆ ಸಾಕ್ಷ್ಯಾಧಾರಗಳಿಂದ ಸ್ಪಷ್ಟವಾಗಿ ತಿಳಿದು ಬಂದಿರುತ್ತದೆ ಹಾಗೂ ಮೇಲಾಧಿಕಾರಿಗಳೊಂದಿಗೆ ಅವಿಧೇಯತೆಯಿಂದ ವರ್ತಿಸಿರುವುದು ಸಾಬೀತಾಗಿರುತ್ತದೆ.

**ಆರೋಪ–4** ಪಾಂಡವಪುರ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿ ಸಂದರ್ಶನದಲ್ಲಿ ಶ್ರೀಮತಿ ನಸೀಮಾ ಜಾನ್ ಅಭ್ಯರ್ಥಿಯನ್ನು ಆಯ್ಕೆ ಮಾಡಿಲ್ಲ ಎಂಬುದರ ಕುರಿತು ಆರೋಪಿತ ನೌಕರರು ಬಾಲವಿಕಾಸ ಯೋಜನಾ ಕಛೇರಿಗೆ ಬಂದು ಅಧಿಕಾರಿಗಳು ಹಾಗೂ ಆಯ್ಕೆ ಸಮಿತಿ ಸದಸ್ಯರು ಅವ್ಯವಹಾರ ಮಾಡಿದ್ದಾರೆ ಎಂದು ಆರೋಪಿಸಿ ಈ ಬಗ್ಗೆ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಕಛೇರಿಗೆ ಬಂದು ಈ ಅಭ್ಯರ್ಥಿಯನ್ನು ಆಯ್ಕೆ ಮಾಡಲಿಲ್ಲವೆಂಬ ಕಾರಣಕ್ಕಾಗಿ ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರನ್ನು ಅಧಿಕಾರಿಗಳ ಮುಂದೆ ಅವಾಚ್ಯ ಶಬ್ದಗಳಿಂದ ನಿಂದಿಸಿರುವ ಕುರಿತು ಸಾಕ್ಷ್ಯಾಧಾರಗಳಿಂದ ಕಂಡುಬಂದಿರುವುದರಿಂದ ಈ ಆರೋಪವೂ ಸಹ ಸಾಬೀತಾಗಿರುತ್ತದೆ.

**ಆರೋಪ–5** ಅಂಗನವಾಡಿ ಕೇಂದ್ರ(2) ಫೆಬ್ರವರಿ 85 ರಿಂದ ಜುಲೈ 86 ರವರೆಗೆ ಶ್ರೀ ಗಿರಿಯಪ್ಪನವರ ಮನೆಯಲ್ಲಿ ನಡೆದಿರುವುದು ನಿಜವಿದ್ದರೂ ಸಹ ಲಕ್ಷ್ಮಮ್ಮ ನವರ ಮನೆಯಲ್ಲಿ ನಡೆದ ಬಗ್ಗೆ ಹಣ ಸಂದಾಯ ಬಿಲ್ಲನ್ನು ಶಿಶು ಅಭಿವೃದ್ಧಿ ಯೋಜನಾ ಕಛೇರಿಗೆ ಸಲ್ಲಿಸಿ 1,400/– ನು ದುರುಪಯೋಗಪಡಿಸಿಕೊಂಡಿರುವ ಆರೋಪದ ಬಗ್ಗೆ ವಿಚಾರಣಾಧಿಕಾರಿಗಳ ವರದಿಯಲ್ಲಿ ರೂ.1,400 ಡಿಡಿ ಮೂಲಕ ಶ್ರೀಮತಿ ಲಕ್ಷ್ಮಮ್ಮ ನವರಿಗೆ ತಲುಪಿರುವುದರಿಂದ ಈ ಮೊತ್ತದಲ್ಲಿ ರೂ.1,173/– ರೂಪಾಯಿಗಳು ದುರುಪಯೋಗ ಆಗಿದೆ ಎಂಬುದನ್ನು ಒಪ್ಪಲು ಬರುವುದಿಲ್ಲವಾದ್ದರಿಂದ ಆರೋಪ ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿದ್ದಾರೆ. ವಿಚಾರಣಾ ವರದಿ ಪ್ರಕಾರ ಈ ಆರೋಪವು ಸಾಬೀತಾಗಿರುವುದಿಲ್ಲ.

ಮೇಲಿನ ಆರೋಪಗಳ ಬಗ್ಗೆ ವಿಚಾರಣಾಧಿಕಾರಿಗಳ ವರದಿಯನ್ನು ಪರಿಶೀಲಿಸಲಾಗಿ ಆರೋಪಿತ ನೌಕರರ ವಿರುದ್ಧ ಒಟ್ಟು 5 ಆರೋಪಗಳ ಪೈಕಿ, 4 ಆರೋಪಗಳು ಸಾಬೀತಾಗಿದ್ದು, ಶಿಸ್ತು ಪ್ರಾಧಿಕಾರ ವಿಧಿಸಿರುವ ದಂಡನೆಯು ಸೂಕ್ತವಾಗಿದ್ದು, ಶ್ರೀಮತಿ ರಶೀದಾ ಬೇಗಂ ಅವರ ಅಪೀಲನ್ನು ಪರಿಶೀಲಿಸಿ ತಿರಸ್ಕರಿಸುವ ಕುರಿತು ಹಾಗೂ ಸದರಿಯವರ ಅಮಾನತ್ತಿನ ಅವಧಿಯನ್ನು 'ಅಮಾನತ್ತು' ಎಂದು ಪರಿಗಣಿಸಿ ಆದೇಶ ಹೊರಡಿಸಿರುವುದು ಸರಿಯಿಲ್ಲದ ಕಾರಣ ಈ ಅವಧಿಯನ್ನು ಕೆ.ಸಿ.ಎಸ್.ಆರ್ ನಿಯಮ 100 ರ ಮೇರೆಗೆ ಆಪಾದಿತ ನೌಕರರಿಗೆ ವೇತನ ರಹಿತ ರಜೆ ಎಂದು ಪರಿಗಣಿಸಲು ನಿರ್ಧರಿಸಿ , ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಮಮಇ 12 ಎಸ್‌ಜೆಡಿ 2005, ಬೆಂಗಳೂರು ದಿನಾಂಕ: 8ನೇ ಜೂನ್, 2005**

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಆದೇಶ ಸಂ:ಮಮಅಇ/ಸಿಬ್ಬಂದಿ/ಶಿಕ್ರ/41/96–97 ದಿನಾಂಕ:19–9–2002ರ ಆದೇಶದ ವಿರುದ್ಧ ಶ್ರೀಮತಿ ರಶೀದಾಬೇಗಂ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಪಾಂಡವಪುರ ಇವರು ದಿ:10–12–2002ರಂದು ಸಲ್ಲಿಸಿರುವ ಮೇಲ್ಮನವಿಯನ್ನು ಪರಿಶೀಲಿಸಿ ಪ್ರಸ್ತಾವನೆಯಲ್ಲಿ ವಿವರಿಸಿರುವ

ಕಾರಣಗಳಿಂದಾಗಿ ತಿರಸ್ಕರಿಸಿದೆ. ಇವರ ಅಮಾನತ್ತಿನ ಅವಧಿಯನ್ನು 'ಅಮಾನತ್ತು' ಎಂದು ಪರಿಗಣಿಸಿ ಆದೇಶಿಸಿರುವುದನ್ನು ಮಾರ್ಪಡಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100ರ ಮೇರೆಗೆ ಆಪಾದಿತ ನೌಕರರ ಅಮಾನತ್ತಿನ ಅವಧಿಯನ್ನು 'ವೇತನ ರಹಿತ ರಜೆ'' ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 869

**ಪ್ರ.ದ.ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ.ಕೆ.ಐ.ಬಿಜಾಪುರ, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಬಗ್ಗೆ ಇಲಾಖಾ ವಿಚಾರಣೆ- ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ದೂರು/96:96-97, ದಿನಾಂಕ:22-01-97.
2. ಸರ್ಕಾರದ ಆದೇಶ ಸಂಖ್ಯೆ: ಕಾಇ 59 ಎಲ್ಎಸ್ಐ 97, ದಿನಾಂಕ:03-10-97.
3. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಪತ್ರ ಸಂಖ್ಯೆ: ಇವಿ/ 02:97-98, ದಿನಾಂಕ:27-01-98.
4. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 59 , ಎಲ್ಎಸ್ಐ 97, ದಿನಾಂಕ:23-06-98.
5. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ , ಸಂಖ್ಯೆ:ದೂರು/96:96-97, ದಿನಾಂಕ:23-07-98.
6. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 59, ಎಲ್ಎಸ್ಐ 97, ದಿನಾಂಕ:13-10-2000.
7. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ಇವಿ/96:96-97, ದಿನಾಂಕ:01-01-2001.
8. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ದೂರು/96:96-97, ದಿನಾಂಕ:06-11-2002.
9. ಡಾ.ಕೆ.ಐ.ಬಿಜಾಪುರ್, ವಿಮಾ ವೈದ್ಯಾಧಿಕಾರಿ, ಇವರ ಮನವಿ, ದಿ:06-08-2003.
10. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ವೈದ್ಯರು:251:2003-04, ದಿನಾಂಕ:07-08-2003.
11. ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಾಇ 59 ಎಲ್ಎಸ್ಐ, 97(ಭಾಗ), ದಿನಾಂಕ:10-09-2003.
12. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 59, ಎಲ್ಎಸ್ಐ 97(ಭಾಗ), ದಿನಾಂಕ:23-09-2003.
13. ಡಾ.ಕೆ.ಐ.ಬಿಜಾಪುರ್, ವಿಮಾ ವೈದ್ಯಾಧಿಕಾರಿ, ಇವರ ರಕ್ಷಣಾ ಹೇಳಿಕೆ ದಿನಾಂಕ:03-11-2003 ಮತ್ತು ದಿನಾಂಕ:04-03-04.
14. ಸರ್ಕಾರಿ ಆದೇಶ ಸಂಖ್ಯೆ: ಕಾಇ 59 ಎಲ್ಎಸ್ಐ 97, ದಿನಾಂಕ:13-07-04.
15. ವಿಚಾರಣಾಧಿಕಾರಿಗಳ ದಿ:3-1-05ರ ವಿಚಾರಣಾ ವರದಿ.
16. 2ನೇ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 59 ಎಲ್ಎಸ್ಐ 97, ದಿನಾಂಕ:19-01-05.
17. ಡಾ.ಕೆ.ಐ.ಬಿಜಾಪುರ್, ವಿಮಾ ವೈದ್ಯಾಧಿಕಾರಿ, ಇವರ ದಿ:15-02-05 ರಕ್ಷಣಾ ಹೇಳಿಕೆ

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (1)ರಲ್ಲಿ ಓದಲಾದ ದಿ:22-01-97ರ ಪತ್ರದಲ್ಲಿ, ಡಾ.ಕೆ.ಐ.ಬಿಜಾಪುರ, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ ಇವರು ದಿನಾಂಕ:15-05-96ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ತಿಳಿಸುತ್ತಾ, ಇವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಕೋರಿ ಕರಡು ದೋಷಾರೋಪಣಾ ಪಟ್ಟಿಯನ್ನು ರೂಪಿಸಿ ಸಲ್ಲಿಸಿದ್ದರು. ಡಾ.ಕೆ.ಐ.ಬಿಜಾಪುರ ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 11ನೇ ನಿಯಮದನುಸಾರ ಇಲಾಖಾ ವಿಚಾರಣೆ ನಡೆಸಲು ಡಾ:ಸುಂದರ್‌ರಾಜ್, ಶಸ್ತ್ರಚಿಕಿತ್ಸಕರು, ಕಾರಾವಿ ಆಸ್ಪತ್ರೆ, ರಾಜಾಜಿನಗರ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಲೇ-ಕಾರ್ಯದರ್ಶಿಗಳು, ಕಾರಾವಿ ಆಸ್ಪತ್ರೆ, ರಾಜಾಜಿನಗರ, ಇವರನ್ನು ಮಂಡನಾಧಿಕಾರಿಗಳನ್ನಾಗಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ (3)ರಲ್ಲಿ ಓದಲಾದ ದಿನಾಂಕ:27-01-98ರ ತಮ್ಮ ವರದಿಯಲ್ಲಿ ವೈದ್ಯರ ವಿರುದ್ಧ ಮಾಡಲಾಗಿದ್ದ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ಪಟ್ಟಿದ್ದರು. ಸದರಿ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ:23-06-98ರ ನೋಟೀಸಿನೊಂದಿಗೆ ಆರೋಪಿತ ವೈದ್ಯಾಧಿಕಾರಿಗೆ ರವಾನಿಸಿ ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬ ಬಗ್ಗೆ ತಮ್ಮ ಅಹವಾಲೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು "left not known" ಎಂಬ ಷರಾದೊಂದಿಗೆ ಹಿಂದಿರುಗಿರುವುದಾಗಿ ಮೇಲೆ (5)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ತಿಳಿಸಿರುತ್ತಾರೆ. ಈ ಮಧ್ಯೆ ಡಾ.ಬಿಜಾಪುರ, ವಿಮಾ ವೈದ್ಯಾಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸುವ ಮುನ್ನ ನಿಯಮಾನುಸಾರ ಅವರಿಗೆ ಆಪಾದನೆಗಳ ಪಟ್ಟಿಯನ್ನು ಜಾರಿ ಮಾಡದೆ ಇರುವುದರಿಂದ ಇವರ ವಿರುದ್ಧ ಮಾಡಲಾದ ಇಲಾಖಾ ವಿಚಾರಣೆ ಸಮರ್ಪಕವಲ್ಲವೆಂದು ಪರಿಗಣಿಸಿ ಇವರ ವಿರುದ್ಧ ಹೊಸದಾಗಿ ವಿಚಾರಣೆ ಮಾಡುವ ಸಲುವಾಗಿ ದೋಷಾರೋಪಣಾ ಪಟ್ಟಿಯನ್ನು ಹೊಸದಾಗಿ ರೂಪಿಸಿ ಮೇಲೆ (6)ರಲ್ಲಿ ಓದಲಾದ ಷೋಕಾಸ್ ನೋಟೀಸಿನೊಂದಿಗೆ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ಸೂಚಿಸಿ ಹೊರಡಿಸಲಾಗಿತ್ತು. ಆದರೆ ನಿರ್ದೇಶಕರು, ಕಾರಾವಿ ಇವರು ಮೇಲೆ (7)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸದರಿ ನೋಟೀಸು ಬಟವಾಡೆಯಾಗದೆ "left" ಎಂಬ ಷರಾದೊಂದಿಗೆ ಹಿಂದಿರುಗಿ ಬಂದಿರುವುದಾಗಿ ತಿಳಿಸಿದ್ದರು ಮುಂದುವರಿದು ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ

28(ಎ) ಪ್ರಕಾರ ರಾಜ್ಯದ ಪ್ರಮುಖ ಕನ್ನಡ ದಿನಪತ್ರಿಕೆ ಸಂಯುಕ್ತಕರ್ನಾಟಕದ ದಿನಾಂಕ:26-07-2001ರ ಸಂಚಿಕೆಯಲ್ಲಿ ಸದರಿ ನೋಟೀಸನ್ನು ಪ್ರಕಟಿಸುವ ಮೂಲಕ ಜಾರಿ ಮಾಡಲಾಗಿದೆ ಎಂದು ನಿರ್ದೇಶಕರು ಮೇಲೆ (8)ರಲ್ಲಿ ಓದಲಾದ ದಿನಾಂಕ:06-11-02ರ ತಮ್ಮ ಪತ್ರದಲ್ಲಿ ವರದಿ ಮಾಡಿದ್ದರು.

ಈ ಮಧ್ಯೆ ಡಾ.ಕೆ.ಐ.ಬಿಜಾಪುರ, ವಿಮಾ ವೈದ್ಯಾಧಿಕಾರಿ ಇವರು ಮೇಲೆ (9)ರಲ್ಲಿ ಓದಲಾದ ದಿನಾಂಕ:06-08-2003ರ ಮನವಿಯಲ್ಲಿ ಇಲಾಖೆಯಲ್ಲಿ ವೈದ್ಯಾಧಿಕಾರಿಗಳಾಗಿ ಸೇವೆಯಲ್ಲಿ ಮುಂದುವರಿಯಲು ಇಚ್ಛಿಸಿರುವುದಾಗಿ ತಿಳಿಸಿದ್ದರಿಂದ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (10)ರಲ್ಲಿ ಓದಲಾದ ದಿನಾಂಕ:07-08-2003ರ ಪತ್ರದಲ್ಲಿ ಅಭಿಪ್ರಾಯ ಪಟ್ಟಂತೆ ಡಾ.ಕೆ.ಐ.ಬಿಜಾಪುರ ಇವರ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಇವರನ್ನು ಕಾರಾವಿ ಆಸ್ಪತ್ರೆ, ಹುಬ್ಬಳ್ಳಿಗೆ ಮೇಲೆ (11)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ನೇಮಕ ಮಾಡಲಾಗಿದೆ. ಡಾ.ಕೆ.ಐ.ಬಿಜಾಪುರ, ವಿಮಾ ವೈದ್ಯಾಧಿಕಾರಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಸಲುವಾಗಿ ಮೇಲೆ (12)ರಲ್ಲಿ ಓದಲಾದ ದಿನಾಂಕ:23-09-2003ರ ಷೋಕಾಸ್ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ, ಆರೋಪಗಳ ಬಗ್ಗೆ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಈ ನೋಟೀಸು ಜಾರಿಯಾದ 15 ದಿನಗಳೊಳಗಾಗಿ ನೀಡುವಂತೆ ಸೂಚಿಸಲಾಗಿತ್ತು. ಮೇಲೆ (13)ರಲ್ಲಿ ಓದಲಾದ ದಿನಾಂಕ:03-11-2003ರ ಮತ್ತು ದಿನಾಂಕ:04-03-2004ರ ತಮ್ಮ ರಕ್ಷಣಾ ಹೇಳಿಕೆಯಲ್ಲಿ ಡಾ.ಕೆ.ಐ.ಬಿಜಾಪುರ ಇವರು ತಮ್ಮ ಹತೋಟಿಗೆ ಮೀರಿದ ಕೌಟುಂಬಿಕ ಕಾರಣಗಳಿಂದಾಗಿ ಸೇವೆಗೆ ಹಾಜರಾಗಲು ಸಾಧ್ಯವಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಇವರ ಹೇಳಿಕೆಯ ಹಾಗೂ ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆಯನ್ನು ನಡೆಸುವ ಸಲುವಾಗಿ ಮೇಲೆ (14)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ವಿ.ಶೀಲವಂತ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಶ್ರೀ ಎಸ್.ವಿ.ಕರಡಿ, ಕಛೇರಿ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ವಿಧಿ ವಿಧಾನಗಳನುಸಾರ ಇಲಾಖಾ ವಿಚಾರಣೆಯನ್ನು ನಡೆಸುವಂತೆ ಆದೇಶಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ (15)ರಲ್ಲಿ ಓದಲಾದ ದಿ:03-01-2005ರ ತಮ್ಮ ವಿಚಾರಣಾ ವರದಿಯಲ್ಲಿ ಡಾ:ಕೆ.ಐ.ಬಿಜಾಪುರ ಇವರ ಮೇಲೆ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ಪಟ್ಟಿರುತ್ತಾರೆ.

ಮೇಲೆ (16)ರಲ್ಲಿ ಓದಲಾದ ನೋಟೀಸಿನೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಡಾ: ಕೆ.ಐ.ಬಿಜಾಪುರ ಇವರಿಗೆ ಕಳುಹಿಸಿ ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದೆಂಬ ಬಗ್ಗೆ ತಮ್ಮ ಅಹವಾಲನ್ನು ಸಲ್ಲಿಸುವುದಿದ್ದರೆ ನೋಟೀಸು ತಲುಪಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಡಾ:ಕೆ.ಐ.ಬಿಜಾಪುರ ಇವರು ಮೇಲೆ (17)ರಲ್ಲಿ ಓದಲಾದ ದಿ:15-02-2005ರ ತಮ್ಮ ರಕ್ಷಣಾ ಹೇಳಿಕೆಯಲ್ಲಿ ತಮ್ಮ ವಿರುದ್ಧ ದಿ:14-10-96 ರಿಂದ 19-09-2003ರವರೆಗಿನ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದಾಗಿ ಆರೋಪಿಸಲಾಗಿದ್ದು, ಈ ಅವಧಿಯಲ್ಲಿ ತಮ್ಮ ಪತ್ನಿಗೆ ಶಸ್ತ್ರಚಿಕಿತ್ಸೆಯಾಗಿದ್ದರಿಂದ ಹಾಗೂ ತಮ್ಮ ಪೋಷಕರು ಸಿಹಿಮೂತ್ರ ರೋಗ ಮತ್ತು ರಕ್ತದೊತ್ತಡದಿಂದ ನರಳುತ್ತಿದ್ದುದರಿಂದ ಇವರುಗಳ ಚಿಕಿತ್ಸೆಯ ಬಗ್ಗೆ ತಾವು ಗಮನ ಹರಿಸಬೇಕಾಗಿದ್ದ ಕಾರಣ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುತ್ತಾರೆ. ತಮ್ಮ ಅನಧಿಕೃತ ಗೈರು ಹಾಜರಾತಿಗೆ ಕಾರಣವಾದ ಅಂಶಗಳನ್ನು ಮಾನವೀಯ ನೆಲೆಯಲ್ಲಿ ಪರಿಶೀಲಿಸಿ ಸದರಿ ಅನಧಿಕೃತ ಗೈರು ಹಾಜರಾತಿ ಪ್ರಕರಣದ ಪೂರ್ವದಲ್ಲಿ ಹಾಗೂ ನಂತರದಲ್ಲಿ ಇಲಾಖೆಗೆ ಸಲ್ಲಿಸಿರುವ ಸೇವೆಯನ್ನು ತಮಗೆ ದಂಡನೆಯನ್ನು ವಿಧಿಸುವ ಬಗ್ಗೆ ನಿರ್ಧರಿಸುವ ಮುನ್ನ ಪರಿಗಣಿಸುವಂತೆ ಕೋರಿರುತ್ತಾರೆ.

ಡಾ:ಕೆ.ಐ.ಬಿಜಾಪುರ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇವರ ವಿರುದ್ಧ ಮಾಡಲಾಗಿದ್ದ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಹಾಗೂ ವಿಚಾರಣಾ ವರದಿಯಲ್ಲಿನ ಅಭಿಪ್ರಾಯವನ್ನು ಒಪ್ಪಿಕೊಳ್ಳದೇ ಇರುವ ಬಗ್ಗೆ ಯಾವುದೇ ಸಮರ್ಥನೀಯ ಕಾರಣಗಳನ್ನು ಆರೋಪಿತ ಸರ್ಕಾರಿ ನೌಕರನು ನೀಡದೇ ಇರುವುದರಿಂದ ಇವರಿಗೆ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರ ಪ್ರಕಾರ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 59 ಎಲ್ಎಸ್ಐ 97, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಡಾ:ಕೆ.ಐ.ಬಿಜಾಪುರ ಇವರು ದಿ:14-10-96ರಿಂದ 19-09-2003ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಸದರಿ ವೈದ್ಯರಿಗೆ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರ ಪ್ರಕಾರ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಪಿ.ಆರ್.874

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಸಿಆಸುಇ 59, ಯೋಮಸ 05, ಬೆಂಗಳೂರು, ದಿನಾಂಕ: 16ನೇ ಜೂನ್, 2005**

**ವಿಷಯ:** ಪ್ರತಿ ತಿಂಗಳ ಒಂದನೇ ಮತ್ತು ಮೂರನೇ ಶನಿವಾರಗಳಂದು ಸಾರ್ವಜನಿಕ ಕುಂದು ಕೊರತೆ ಆಲಿಸುವ ದಿನವನ್ನಾಗಿ ಆಚರಿಸುವ ಬಗ್ಗೆ.

**ಉಲ್ಲೇಖ:**
1. ಸುತ್ತೋಲೆ ಸಂಖ್ಯೆ: ಡಿಪಿಎಆರ್ 66 ಯೋಮಸ 2003 ದಿನಾಂಕ: 11.03.2004.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 59 ಯೋಮಸ 2005 ದಿನಾಂಕ: 04.06.2005.

ಮೇಲೆ ಉಲ್ಲೇಖ (1)ರ ಸುತ್ತೋಲೆಯಲ್ಲಿ ಸರ್ಕಾರವು ಪ್ರತಿ ತಿಂಗಳು ಪ್ರಥಮ ಶನಿವಾರವನ್ನು "ಸಾರ್ವಜನಿಕ ಕುಂದು ಕೊರತೆ ಆಚರಿಸುವ ದಿನ" ವನ್ನಾಗಿ ನಡೆಸಿಕೊಂಡು ಹೋಗಲು ಸಂಬಂಧಪಟ್ಟ ಎಲ್ಲಾ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳು/ ಇಲಾಖಾ ಮುಖ್ಯಸ್ಥರು/ ಜಿಲ್ಲಾಧಿಕಾರಿಗಳು/ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಮತ್ತು ಸಂಬಂಧಪಟ್ಟವರು ಸಾರ್ವಜನಿಕ ಕುಂದು ಕೊರತೆಗಳನ್ನು ಖುದ್ದಾಗಿ ಆಲಿಸತಕ್ಕದ್ದೆಂದು ಈಗಾಗಲೇ ಸರ್ಕಾರವು ಸುತ್ತೋಲೆ ಹೊರಡಿಸಿರುವುದು ಸರಿಯಷ್ಟೆ.

ಸದರಿ ಸಾರ್ವಜನಿಕ ಕುಂದು ಕೊರತೆಗಳನ್ನು ಪರಿಹರಿಸುವ ವಿಷಯಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಸರ್ಕಾರದ ಆಹಾರ ಭದ್ರತೆ ಯೋಜನೆಗಳಾದ ಸಾರ್ವಜನಿಕ ವಿತರಣಾ ಪದ್ಧತಿ, ಐ.ಸಿ.ಡಿ.ಎಸ್., ಕೂಲಿಗಾಗಿ ಕಾಳು, ಮಧ್ಯಾಹ್ನದ ಊಟ ಯೋಜನೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅನೇಕ ಮಾರ್ಗೋಪಾಯಗಳ ಬಗ್ಗೆ ಉಲ್ಲೇಖ(2)ರಲ್ಲಿ ಸವಿಸ್ತರವಾದ ಆದೇಶವನ್ನು ದಿನಾಂಕ: 04.06.2005ರಂದು ಹೊರಡಿಸಿದೆ (ಪ್ರತಿ ಲಗತ್ತಿಸಿದೆ). ಅದರಂತೆ ಜಿಲ್ಲೆಯ ಜಿಲ್ಲಾಧಿಕಾರಿ, ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಮತ್ತು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳನ್ನೊಳಗೊಂಡ 3 ಜನ ಸದಸ್ಯರ ಸಮಿತಿಯೊಂದು ಪ್ರತಿ ತಿಂಗಳ ಒಂದನೇ ಮತ್ತು ಮೂರನೇ ಶನಿವಾರಗಳಂದು ಸಾರ್ವಜನಿಕ ಕುಂದು ಕೊರತೆಗಳನ್ನು ಆಲಿಸುವುದು.

ಸದರಿ ಸರ್ಕಾರದ ಆದೇಶದಂತೆ ಈ ಕೆಳಕಂಡ ಅಂಶಗಳ ಬಗ್ಗೆ ಸಂಕ್ಷಿಪ್ತ ವಿವರಗಳನ್ನೊಳಗೊಂಡ ವರದಿಯೊಂದನ್ನು ಪ್ರತಿ ಸಭೆಯ ನಂತರದ ಸೋಮವಾರದಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ, ಜನಸ್ಪಂದನ ಕೋಶ, ವಿಭಾಗ 20ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-560001, ಅವರಿಗೆ ಕಳುಹಿಸಿಕೊಡುವುದು.

ಮುಂದಿನ ಸಭೆಯ ಅನುಸರಣಾ ವರದಿಯನ್ನು ಸಲ್ಲಿಸಲು ಸೂಚಿಸಿದೆ.

ಆದ್ದರಿಂದ ಈ ಕೆಳಕಂಡ ನಮೂನೆಯಲ್ಲಿ ಪ್ರತಿ 2ನೇ ಸೋಮವಾರ ಹಾಗೂ ಪ್ರತಿ 4ನೇ ಸೋಮವಾರದಂದು ಅನುಸರಣಾ ವರದಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ, ಜನಸ್ಪಂದನ ಕೋಶ, ವಿಭಾಗ 20ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯಗೋಪುರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-560001 ತಪ್ಪದೇ ಸಲ್ಲಿಸತಕ್ಕದ್ದು.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಹಿಂದಿನ ಬಾಕಿ | 1-3ನೇ ಶನಿವಾರ | | ಒಟ್ಟು | ವಿಲೇವಾರಿಯಾದ ಅರ್ಜಿಗಳ ಸಂಖ್ಯೆ | | ಬಾಕಿ | ಷರಾ |
|---|---|---|---|---|---|---|---|---|---|
| | | | ಸ್ವೀಕೃತಿಯಾದ ಅರ್ಜಿಗಳ ಸಂಖ್ಯೆ | ಸ್ವೀಕೃತಿಯಾದ ಅರ್ಜಿಗಳ ಸಂಖ್ಯೆ | | ಪರ | ವಿರೋಧ | | |
| 1 | 2 | 3 | 4 | 5 | 6 | 7 | 8 | 9 | 10 |
| | | | | | | | | | |

**ಬಿ.ಎಂ. ಶಿವಪ್ರಕಾಶ್**
ಸರ್ಕಾರದ ಸಹ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನ ಕೋಶ).

ಪಿ.ಆರ್. 868

## ಆರ್ಥಿಕ ಸಚಿವಾಲಯ

**ವಿಷಯ:** 21-ಶಿವಮೊಗ್ಗ ಲೋಕಸಭಾ ಕ್ಷೇತ್ರದ ಉಪಚುನಾವಣೆ 2005- ಮತಗಟ್ಟೆ ಸಿಬ್ಬಂದಿಗೆ ಮತದಾನದ ಮಾರನೇ ದಿನದಂದು ವಿಶೇಷ ಸಾಂದರ್ಭಿಕ ರಜೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ದಿನಾಂಕ: 02.06.2005ರ ಜಂಟಿ ಮುಖ್ಯ ಚುನಾವಣಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆಗಳು) ಇವರ ಪತ್ರ ಸಂಖ್ಯೆ: ಸಿಆಸುಇ 1 ಚುರಫೋ 2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 02.06.2005ರ ಪತ್ರದಲ್ಲಿ ಶಿವಮೊಗ್ಗ ಲೋಕಸಭಾ ಕ್ಷೇತ್ರವು 8 ವಿಧಾನಸಭಾ ಕ್ಷೇತ್ರಗಳನ್ನೊಳಗೊಂಡಿದ್ದು ಪ್ರತಿಯೊಂದು ವಿಧಾನಸಭಾ ಕ್ಷೇತ್ರವೂ ಬೇರೆ ಬೇರೆ ತಾಲ್ಲೂಕುಗಳ ಪರಿಮಿತಿಯಲ್ಲಿದ್ದು ಸದರೀ ಶಿವಮೊಗ್ಗ ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಮತಗಟ್ಟೆ ಸಿಬ್ಬಂದಿಯನ್ನು ಒಂದು ತಾಲ್ಲೂಕಿನಿಂದ ಮತ್ತೊಂದು ತಾಲ್ಲೂಕಿಗೆ ನೇಮಕಾತಿ ಮಾಡಬೇಕಾಗಿದ್ದು ಸದರಿ ಸಿಬ್ಬಂದಿಯು ನೇಮಕಾತಿ ಹೊಂದಿರುವ ವಿಧಾನಸಭಾ ಕ್ಷೇತ್ರ: ತಾಲ್ಲೂಕಿನಲ್ಲಿ ದಿನಾಂಕ: 02.06.2005ರಂದು ಮತದಾನ ಮುಗಿದ ಮೇಲೆ ಚುನಾವಣಾ ಸಾಮಗ್ರಿ: ದಾಖಲಾತಿಗಳನ್ನು ನಿರ್ದಿಷ್ಟ ಪಡಿಸಿದ ಪ್ರಾಧಿಕಾರಕ್ಕೆ ಒಪ್ಪಿಸಿ ತಮ್ಮ ತಾಲ್ಲೂಕಿನ ವಾಸಸ್ಥಳಗಳಿಗೆ ಸೇರಲು ಮಾರನೇ ದಿನ ಅಂದರೆ ದಿನಾಂಕ: 03.06.2005ರ ಬೆಳಗಿನ ಜಾವವಾಗಲಿರುವುದರಿಂದ ಚುನಾವಣಾ ಕರ್ತವ್ಯ ನಿರ್ವಹಿಸಿದ ಶಿವಮೊಗ್ಗ ಲೋಕಸಭಾ ಕ್ಷೇತ್ರದ ಮತಗಟ್ಟೆ ಸಿಬ್ಬಂದಿಗೆ ದಿನಾಂಕ: 03.06.2005ರಂದು ವಿಶೇಷ ಸಾಂದರ್ಭಿಕ ರಜೆ ಮಂಜೂರು ಮಾಡುವಂತೆ ಜಂಟಿ ಮುಖ್ಯ ಚುನಾವಣಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಜಂಟಿ ಮುಖ್ಯ ಚುನಾವಣಾಧಿಕಾರಿಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿದ್ದು, ದಿನಾಂಕ: 02.06.2005ರಂದು ನಡೆದ 21-ಶಿವಮೊಗ್ಗ ಲೋಕಸಭಾ ಕ್ಷೇತ್ರದ ಉಪಚುನಾವಣೆಯಲ್ಲಿ ಚುನಾವಣಾ ನಂತರ ಕಾರ್ಯ ನಿರ್ವಹಿಸಿದ ವಿಶಿಷ್ಟ ಸಂದರ್ಭಗಳನ್ನು ಗಮನದಲ್ಲಿರಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 5, ಸನಿತಿ 2005, ಬೆಂಗಳೂರು, ದಿನಾಂಕ: 9ನೇ ಜೂನ್, 2005**

ದಿನಾಂಕ: 02.06.2005ರಂದು ನಡೆದ 21-ಶಿವಮೊಗ್ಗ, ಲೋಕಸಭಾ ಕ್ಷೇತ್ರದ ಉಪಚುನಾವಣೆಯಲ್ಲಿ, ಚುನಾವಣಾ ನಂತರ ಕಾರ್ಯ ನಿರ್ವಹಿಸುವ ವಿಶಿಷ್ಟ ಸಂದರ್ಭಗಳನ್ನು ಗಮನದಲ್ಲಿರಿಸಿ ದಿನಾಂಕ: 02.06.2005ರಂದು ಮತಗಟ್ಟೆ ಕರ್ತವ್ಯ ನಿರ್ವಹಿಸಿದ ಕಾರಣದಿಂದಾಗಿ ದಿನಾಂಕ: 03.06.2005ರಂದು ಕಛೇರಿಗೆ ಗೈರು ಹಾಜರಾದ ಸಿಬ್ಬಂದಿಯ ಗೈರು ಹಾಜರಿಯನ್ನು ವಿಶೇಷ ಸಾಂದರ್ಭಿಕ ರಜೆಯೆಂದು ಪರಿಗಣಿಸಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಗೋಪಾಲಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಆರ್ಥಿಕ ಇಲಾಖೆ (ಸೇವೆಗಳು-1).

ಪಿ.ಆರ್. 871

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೃಷ್ಣಾ ಮೇಲ್ದಂಡೆ ಯೋಜನೆಯ ಶಹಾಪುರ ಶಾಖಾ ಕಾಲುವೆಯ ವಿತರಣಾ ಕಾಲುವೆ ನಂ.4 ಕಿ.ಮೀ. 0.00 ರಿಂದ ಕಿ.ಮೀ.3.00 ವರೆಗಿನ ನಿರ್ಮಾಣ ಕೆಲಸದ (ಉಳಿಕೆ ಕೆಲಸ) -ಎ.ಸಿ.ನಂ.4/1993 ಗುತ್ತಿಗೆಯ ಏಕ ಮಧ್ಯಸ್ಥಿಕೆದಾರರ ಐತೀರ್ಪನ್ನು ಒಪ್ಪಿಕೊಳ್ಳುವ ಬಗ್ಗೆ.

**ಸೇರ್ಪಡೆ ಆದೇಶ**

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 13 ಡಬ್ಲ್ಯೂಯುಸಿ 2003, ಬೆಂಗಳೂರು, ದಿನಾಂಕ: 9ನೇ ಜೂನ್, 2005**

ಸರ್ಕಾರದ ಆದೇಶ ಸಂಖ್ಯೆ: ಜಸಂಇ 13 ಡಬ್ಲ್ಯೂಯುಸಿ 2003, ಬೆಂಗಳೂರು, ದಿನಾಂಕ: 24.05.2005 ಆದೇಶದ ಭಾಗದಲ್ಲಿ ಈ ಕೆಳಕಂಡಂತೆ ಸೇರಿಸಿಕೊಂಡು ಓದಿಕೊಳ್ಳುವುದು.

"ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/ 228/ ಆಕೋ-1/2005, ದಿನಾಂಕ: 06.05.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್. 872

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಜಲಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ.ಕೋಶ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಜಲಸಂಪನ್ಮೂಲ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2002, ದಿನಾಂಕ: 23.01.2002.
2. ಅಧಿಸೂಚನೆ ಸಂಖ್ಯೆ: ಸಿಆಸುಇ 1 ಎಸ್‌ಎಎಸ್ 2000 ದಿನಾಂಕ: 22.01.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2003 ದಿನಾಂಕ: 03.02.2003.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 7 ಸಸಿವಿ 2004, ದಿನಾಂಕ: 04.02.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 23.01.2002ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ದಿನಾಂಕ: 18.02.2002 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1. | ಪ್ರಧಾನ ಕಾರ್ಯದರ್ಶಿ,<br>ಜಲಸಂಪನ್ಮೂಲ ಇಲಾಖೆ (ಐ.ಎ.ಎಸ್. ಅಧಿಕಾರಿಯಿಂದ ತುಂಬುವುದು) | 1 ಹುದ್ದೆ |
| 2. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2:<br>ಪತ್ರಾಂಕಿತ ಆಪ್ತ ಸಹಾಯಕ) | 1 ಹುದ್ದೆ |
| 3. | ಶೀಘ್ರಲಿಪಿಗಾರ (ಪತ್ರಾಂಕಿತ ಆಪ್ತ ಸಹಾಯಕ: ಹಿರಿಯ ಶೀಘ್ರಲಿಪಿಗಾರ) | 2 ಹುದ್ದೆಗಳು |
| 4. | ಭಾಷಾಂತರಕಾರರು (ಶಾಖಾಧಿಕಾರಿ) - ಹಿರಿಯ ಸಹಾಯಕ: | 1 ಹುದ್ದೆ |
| 5. | ಕಿರಿಯ ಸಹಾಯಕ | 1 ಹುದ್ದೆ |
| 6. | ವಾಹನ ಚಾಲಕ | 1 ಹುದ್ದೆ |
| 7. | ದಲಾಯತ್ | 2 ಹುದ್ದೆಗಳು |
| | ಒಟ್ಟು | **9 ಹುದ್ದೆಗಳು** |

ನಂತರ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 04.02.2004ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 01.01.2004ರಿಂದ 31.12.2004ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಪ್ರಸ್ತುತ ಈ ಹುದ್ದೆಗಳ ವಿಸ್ತರಿತ ಕಾಲಾವಧಿಯು ದಿನಾಂಕ: 31.12.2004ಕ್ಕೆ ಮುಕ್ತಾಯಗೊಂಡಿರುವ ಹಿನ್ನೆಲೆಯಲ್ಲಿ ಈ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 36, ಸಸಿವಿ 2005, ಬೆಂಗಳೂರು, ದಿನಾಂಕ: 14ನೇ ಜೂನ್, 2005**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು, ಪ್ರಸ್ತಾವನೆಯಲ್ಲಿ ವಿವರಿಸಿರುವ ಪೂರಕ 8 ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 01.01.2005 ರಿಂದ 31.12.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 873

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿನ ವೈದ್ಯರು ದರ್ಜೆ-1 (ಯೋಗ) ಹುದ್ದೆಗೆ ಕಾರ್ಯಕಾರಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 38 ಸೇನಿಇ 96, ದಿನಾಂಕ: 01.08.1996.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 191 ಪಿಐಎಂ 2000, ದಿನಾಂಕ: 14.08.2001.
3. ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: 33/ ಸಿಬ್ಬಂದಿ-1: 2003-2004, ದಿನಾಂಕ: 18.12.2004.

**ಪ್ರಸ್ತಾವನೆ:**

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಮೇಲ್ದರ್ಜೆಗೇರಿಸಲಾದ ವೈದ್ಯರು ದರ್ಜೆ-1 (ಯೋಗ) ಹುದ್ದೆಯನ್ನು ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಭರ್ತಿ ಮಾಡಲು ಸೂಚಿಸಿರುವುದರಿಂದ ಸದರಿ ಹುದ್ದೆಯನ್ನು ಪದೋನ್ನತಿಯ ಮೂಲಕ ಭರ್ತಿ ಮಾಡಲು ಮೇಲೆ ಓದಲಾದ (1)ರ ಪತ್ರದಲ್ಲಿ ಅಧಿಕೃತ ಜ್ಞಾಪನಾ ಪತ್ರದಲ್ಲಿ ಕಲ್ಪಿಸಿರುವ ಅವಕಾಶವನ್ನು ಉಪಯೋಗಿಸಿಕೊಂಡು ಮೇಲೆ ಓದಲಾದ (2)ರ ಆದೇಶದಲ್ಲಿ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ಕಲ್ಪಿಸಿ ಹುದ್ದೆಯನ್ನು ಭರ್ತಿ ಮಾಡಲಾಗಿತ್ತು. ಈಗ ನಿರ್ದೇಶಕರು, ಮೇಲೆ ಓದಲಾದ (3)ರ ಪತ್ರದಲ್ಲಿ ವೈದ್ಯರು ದರ್ಜೆ-1 (ಯೋಗ) ಏಕೈಕ ಹುದ್ದೆಯಾಗಿದ್ದು- ಪುನಃ ಖಾಲಿ ಆಗಿರುವುದರಿಂದ ಸಾರ್ವಜನಿಕ ಹಿತ ದೃಷ್ಟಿಯಿಂದ ಶೀಘ್ರವಾಗಿ ಅರ್ಹ ವೈದ್ಯರಿಗೆ ಪದೋನ್ನತಿಯನ್ನು ನೀಡಬೇಕಾಗಿದೆ ಎಂದು ತಿಳಿಸಿದ್ದಾರೆ. ಮತ್ತು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿಯ ವಿಷಯವು ಪರಿಶೀಲನೆಯಲ್ಲಿದ್ದು ತಿದ್ದುಪಡಿ ನೇಮಕಾತಿ ನಿಯಮಗಳನ್ನು ಹೊರಡಿಸಲು ವಿಳಂಬವಾಗುವ ಸಾಧ್ಯತೆ ಇರುವುದರಿಂದ ಹಾಗೂ ಕಾರ್ಯಕಾರಿ ಆದೇಶದ ಅವಧಿಯು ಸಹ ಮುಗಿದಿರುವುದರಿಂದ ಪುನಃ 6 ತಿಂಗಳ ಅವಧಿಗೆ ವೈದ್ಯರು ದರ್ಜೆ-1 (ಯೋಗ) ಹುದ್ದೆಗೆ ಕಾರ್ಯಕಾರಿ ಆದೇಶವನ್ನು ಹೊರಡಿಸಬೇಕೆಂದು ಕೋರಿದ್ದಾರೆ. ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 52 ಪಿಐಎಂ 2005, ಬೆಂಗಳೂರು, ದಿನಾಂಕ: 13ನೇ ಜೂನ್, 2005**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಸೃಜಿಸಲಾದ ವೇತನ ಶ್ರೇಣಿ ರೂ.7400-13120ರ ವೈದ್ಯರು ದರ್ಜೆ-1 (ಯೋಗ) ಹುದ್ದೆಗೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನೇಮಕಾತಿ ವಿಧಾನಕ್ಕೆ ತಿದ್ದುಪಡಿ ಮಾಡಲಿಲ್ಲವಾದ್ದರಿಂದ ತಕ್ಷಣದಿಂದ ಜಾರಿಗೆ ಬರುವಂತೆ ಅನುಬಂಧದಲ್ಲಿರುವಂತೆ ಮತ್ತು ನೇಮಕಾತಿ ವಿಧಾನವನ್ನು 6 ತಿಂಗಳವರೆಗೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 49 ಸೇನಿಡಿ 2005, ದಿನಾಂಕ: 26.05.2005 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಭಾಕರ ಎಂ. ಶೇಟ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 52 ಪಿಐಎಂ 2005, ಬೆಂಗಳೂರು, ದಿನಾಂಕ: 09.06.2005ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಹುದ್ದೆಗಳ ದರ್ಜೆ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|
| | | ಖಾಯಂ ತಾತ್ಕಾಲಿಕ | | |
| 1 | 2 | 3 | 4 | 5 |
| 1. | ವೈದ್ಯರು ದರ್ಜೆ-1 (ಯೋಗ) ರೂ.7400-13120 | 01 | ವೈದ್ಯರು ದರ್ಜೆ-2 (ಯೋಗ) ವೃಂದದಿಂದ ಪದೋನ್ನತಿಯ ಮೂಲಕ | **ಪದೋನ್ನತಿಗೆ:** ವೈದ್ಯರು ದರ್ಜೆ-2 (ಯೋಗ) ವೃಂದದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸಿರಬೇಕು. ಪರಂತು 5 ವರ್ಷಗಳ ಸೇವೆಯನ್ನು ಸದರಿ ವೃಂದದಲ್ಲಿ ಪೂರೈಸಿರುವ ಅಧಿಕಾರಿಗಳು ಇಲ್ಲದಿದ್ದಲ್ಲಿ 3 ವರ್ಷಗಳ ಸೇವೆಯನ್ನು ಪೂರೈಸಿರುವ ಅಧಿಕಾರಿಗಳನ್ನು ಗಣನೆಗೆ ತೆಗೆದುಕೊಳ್ಳತಕ್ಕದ್ದು. |

**ಪ್ರಭಾಕರ ಎಂ. ಶೇಟ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 875

**ವಿಷಯ:** ನಿವೃತ್ತ ವೈದ್ಯಕೀಯ ಶಿಕ್ಷಣ ನಿರ್ದೇಶಕರಾದ ಡಾ: ಶೀಲಾ ಜಿ. ನಾಯಕ್, ಮೈಸೂರು, ವೈದ್ಯಕೀಯ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಡಾ: ಎಸ್.ಎಂ. ಚಂದ್ರಶೇಖರಶೆಟ್ಟಿ ಹಾಗೂ ನಿವೃತ್ತ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕ ಡಾ: ಪಿ. ಶೆಣೈ ರವರುಗಳ ವಿರುದ್ಧ ಮೈಸೂರು ವೈದ್ಯಕೀಯ ಕಾಲೇಜಿನ ಕೆ.ಆರ್. ಆಸ್ಪತ್ರೆಯ ಕಾನೂನು ಬಾಹಿರ ಶವಗಳ ಮಾರಾಟದ ಜಾಲಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ.

**ಓದಲಾಗಿದೆ:**
1. ದಿನಾಂಕ: 17.07.2003 ಸಂಖ್ಯೆ: ಆಕುಕ 216 ಎಂಎಸ್‌ಎಫ್ 03ರ ಕಾರಣ ಕೇಳುವ ನೋಟೀಸ್‌ಗಳು.
2. ದಿನಾಂಕ: 30.07.2003ರ ಅಂದಿನ ಕೆ.ಆರ್. ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕ ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ ರವರ ಅರ್ಜಿ.
3. ದಿನಾಂಕ: 31.07.2003ರ ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರಾಗಿದ್ದ ಡಾ: ಶೀಲಾ ಜಿ. ನಾಯಕ್ ರವರ ಅರ್ಜಿ.

4. ದಿನಾಂಕ: 01.08.2003ರ ಮೈಸೂರು ವೈದ್ಯಕೀಯ ಕಾಲೇಜಿನ ಅಂದಿನ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕ ಡಾ: ಪಿ.ಶೆಣೈ ರವರ ಅರ್ಜಿ.
5. ದಿನಾಂಕ: 17.12.2004 ಸಂಖ್ಯೆ: ಇಪಿಜಿ:ಎಂ೩: 5/ 2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದೊಂದಿಗೆ ಅಂತ್ಯಗೊಂಡ ಪತ್ರವ್ಯವಹಾರ.

**ಪೀಠಿಕೆ:**

1. ಮೈಸೂರು ವೈದ್ಯಕೀಯ ಕಾಲೇಜಿನ ಕೆ.ಆರ್. ಆಸ್ಪತ್ರೆಯಿಂದ ದಿನಾಂಕ: 03.07.2003ರಂದು 4 ಅನಾಥ ಪುರುಷ ಶವಗಳನ್ನು ಅಕ್ರಮವಾಗಿ ಮತ್ತು ಅನಧಿಕೃತವಾಗಿ ಸಾಗಣೆ ಮಾಡುತ್ತಿದ್ದಾಗ ಮೈಸೂರು ನಗರ ಪೊಲೀಸರು ಅದನ್ನು ಪತ್ತೆ ಹಚ್ಚಿದ್ದರು. ತನಿಖೆಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನ ನಿವೃತ್ತ ವಿಧಿವೈದ್ಯ ಶಾಸ್ತ್ರ ಪ್ರಾಧ್ಯಾಪಕ ಡಾ: ಕೆ.ಡಬ್ಲ್ಯೂ.ಡಿ. ರವಿಚಂದರ್ ರವರು ನೀಡಿದ್ದ ಪತ್ರವನ್ನಾಧಾರಿಸಿ ಶವ ಸಾಗಣೆ ಮಾಡಲಾಗುತ್ತಿತ್ತು ಎಂದು ವ್ಯಕ್ತವಾಗುತ್ತಿತ್ತು. ಪ್ರಕರಣದಲ್ಲಿ ಭರಿಸಲಾದ ಪೂರ್ವಭಾವಿ ವಿಚಾರಣೆಯಿಂದ ಶವಗಾರದ ನಿರ್ವಹಣೆ ಮತ್ತು ಮೇಲ್ವಿಚಾರಣೆಯಲ್ಲಿ ಮತ್ತು ಶವಗಾರದ ದಾಖಲೆಗಳ ವಿಚಾರಣೆಯಲ್ಲಿ ಲೋಪದೋಷಗಳಿರುವುದು ಸುಸ್ಪಷ್ಟವಾಗಿ ಬಿಂಬಿತವಾಗಿತ್ತು. ಅಧಿಕೃತ ಕಾರ್ಯನಿರ್ವಹಣೆಯಲ್ಲಿ ಕರ್ತವ್ಯಚ್ಯುತಿ ಎಸಗಿದ್ದ ಈ ಕೆಳಕಂಡ ಅಧಿಕಾರಿಗಳಿಂದ ವಿವರಣೆಗಳನ್ನು ಪಡೆಯಲಾಗಿದೆ.

1. ಡಾ: ಶೀಲಾ ಜಿ. ನಾಯಕ್, ಅಂದಿನ ಪ್ರಾಂಶುಪಾಲರು, ಮೈಸೂರು ವೈದ್ಯಕೀಯ ಕಾಲೇಜು.
2. ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಅಂದಿನ ವೈದ್ಯಕೀಯ ಅಧೀಕ್ಷಕರು, ಕೆ.ಆರ್. ಆಸ್ಪತ್ರೆ.
3. ಡಾ: ಪಿ. ಶೆಣೈ, ಅಂದಿನ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕರು, ಎಂಎಂಸಿ.

2. ಅವರುಗಳು ಸಲ್ಲಿಸಿದ್ದ ವಿವರಣೆಯನ್ನು ವಿಮರ್ಶಿಸಲಾಯಿತು. ಅವುಗಳು ತೃಪ್ತಿಕರವಾಗಿಲ್ಲ ಮತ್ತು ಅಂಗೀಕಾರ್ಹವಲ್ಲ. ಮೇಲ್ನೋಟದಲ್ಲಿ ಅವರ ತಪ್ಪುಒಪ್ಪುಗಳು ಮತ್ತು ಕರ್ತವ್ಯ ನಿರ್ವಹಣೆಯಲ್ಲಿ ಉದಾಸೀನತೆ ಮತ್ತು ನಿರ್ಲಕ್ಷ್ಯತೆ ಬಿಂಬಿತವಾಗುತ್ತದೆ. ಅದೊಂದು ತೀವ್ರ ಸ್ವರೂಪದ ದುರ್ನಡತೆಯಾಗಿ ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಡಿ ಕ್ರಮ ಕೈಗೊಳ್ಳಲು ಆರ್ಕಷಿತರಾಗಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 48 ಎಂಎಂಸಿ 2005, ಬೆಂಗಳೂರು, ದಿನಾಂಕ: 7ನೇ ಜೂನ್, 2005**

3. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ವೈದ್ಯಕೀಯ ಶಿಕ್ಷಣ ಇಲಾಖೆಯ ನಿವೃತ್ತ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮಕ್ಕಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರ ಮಂಜೂರಾತಿ ನೀಡಿದೆ.

1. ಡಾ: ಶೀಲಾ ಜಿ. ನಾಯಕ್, ಅಂದಿನ ಪ್ರಾಂಶುಪಾಲರು, ಮೈಸೂರು, ವೈದ್ಯಕೀಯ ಕಾಲೇಜು.
2. ಡಾ: ಎಸ್.ಎಂ. ಚಂದ್ರಶೇಖರ ಶೆಟ್ಟಿ, ಅಂದಿನ ವೈದ್ಯಕೀಯ ಅಧೀಕ್ಷಕರು, ಕೆ.ಆರ್. ಆಸ್ಪತ್ರೆ.
3. ಡಾ: ಪಿ. ಶೆಣೈ, ಅಂದಿನ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್.877

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಶಿಕ್ಷಣ ಸಚಿವಾಲಯ

**ವಿಷಯ:** ದ್ವಿತೀಯ ಪದವಿ ಪೂರ್ವ ಪರೀಕ್ಷೆಗೆ ಖಾಸಗಿಯಾಗಿ, ನೇರವಾಗಿ ಹಾಜರಾಗುವ ಅಭ್ಯರ್ಥಿಗಳ ಕನಿಷ್ಠ ವಯಸ್ಸನ್ನು 18 ರಿಂದ 17 ವರ್ಷಗಳಿಗೆ ಇಳಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಪತ್ರ ಸಂಖ್ಯೆ: ಇಡಿ 125 ಟಿಪಿಯು 90, ದಿನಾಂಕ: 03.07.1992.
2. ಸರ್ಕಾರದ ಆದೇಶ ಸಂಖ್ಯೆ: ಇಡಿ 159 ಟಿಪಿಯು 96, ದಿನಾಂಕ: 20.09.1996.
3. ವಿದ್ಯಾರ್ಥಿಗಳ ದಿನಾಂಕ: 10.01.2005ರ ಮನವಿ.
4. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ: ಪಪೂಶಿಇ/ ಆಶಾ(ಸನಿ) ಪರೀಕ್ಷೆ/ ಖಾವ್ವಾ/ 2001-02, ದಿನಾಂಕ: 17.03.2005.

**ಪ್ರಸ್ತಾವನೆ:**

ರಾಜ್ಯದಲ್ಲಿ ದ್ವಿತೀಯ ಪದವಿ ಪೂರ್ವ ಪರೀಕ್ಷೆಗೆ ಖಾಸಗಿಯಾಗಿ ನೇರವಾಗಿ ಹಾಜರಾಗುವ ಅಭ್ಯರ್ಥಿಗಳ ಕನಿಷ್ಠ ವಯೋಮಿತಿಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 19 ವರ್ಷಗಳಿಗೆ ನಿಗದಿಪಡಿಸಲಾಗಿತ್ತು. ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ಹಾಗೂ ವಿದ್ಯಾರ್ಥಿಗಳು ಈ ವಯೋಮಿತಿಯನ್ನು 18 ವರ್ಷಕ್ಕೆ ಇಳಿಸುವಂತೆ ಕೋರಿರುವ ಹಿನ್ನಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಯೋಮಿತಿಯನ್ನು 18 ವರ್ಷಗಳಿಗೆ ನಿಗದಿಪಡಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವಿದ್ಯಾರ್ಥಿಗಳು ತಮ್ಮ ಮನವಿಯಲ್ಲಿ ಸರ್ಕಾರವು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಖಾಸಗಿಯಾಗಿ ನೇರವಾಗಿ ಕುಳಿತುಕೊಳ್ಳಲು ಕನಿಷ್ಠ ವಯೋಮಿತಿಯನ್ನು 16 ವರ್ಷದಿಂದ 15ಕ್ಕೆ ಇಳಿಸಿದೆ. ಆದುದರಿಂದ ದ್ವಿತೀಯ ಪಿಯುಸಿ ಪರೀಕ್ಷೆಗೆ ಖಾಸಗಿಯಾಗಿ ನೇರವಾಗಿ ಹಾಜರಾಗಲು ನಿಗದಿಪಡಿಸಲಾಗಿರುವ 18 ವರ್ಷ ವಯಸ್ಸನ್ನು 17 ವರ್ಷಕ್ಕೆ ಇಳಿಸಬೇಕೆಂದು ಮನವಿ ಮಾಡಿರುತ್ತಾರೆ. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ನಿಯಮಾನುಸಾರ ಪರಿಶೀಲಿಸಿ ಕನಿಷ್ಠ ವಯೋಮಿತಿಯನ್ನು 17 ವರ್ಷಗಳಿಗೆ ಇಳಿಸಬಹುದೆಂದು ಶಿಫಾರಸ್ಸಿನೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 09, ಟಿಪಿಯು 2005, ಬೆಂಗಳೂರು, ದಿನಾಂಕ: 31ನೇ ಮೇ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯದಲ್ಲಿ ಖಾಸಗಿ ವಿದ್ಯಾರ್ಥಿಗಳು/ ಅಭ್ಯರ್ಥಿಗಳು ದ್ವಿತೀಯ ಪದವಿ ಪೂರ್ವ ಪರೀಕ್ಷೆಗಳನ್ನು ನೇರವಾಗಿ ತೆಗೆದುಕೊಳ್ಳಲು ಪ್ರಸ್ತುತ ನಿಗದಿಪಡಿಸಲಾಗಿರುವ 18 ವರ್ಷಗಳ ವಯೋಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಾರ್ಚ್ 31ರ ಅಂತ್ಯಕ್ಕೆ 17 ವರ್ಷಗಳಿಗೆ ನಿಗದಿಪಡಿಸಲಾಗಿದೆ.

**ಷರತ್ತುಗಳು**

1. ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಮಾತ್ರ ದ್ವಿತೀಯ ಪಿಯುಸಿ ಪರೀಕ್ಷೆಗೆ ನೇರವಾಗಿ ಹಾಜರಾಗುವ ಖಾಸಗಿ ಅಭ್ಯರ್ಥಿಗಳು ನೋಂದಾಯಿಸಿಕೊಳ್ಳತಕ್ಕದ್ದು.
2. ಖಾಸಗಿ ಪದವಿ ಪೂರ್ವ ಕಾಲೇಜುಗಳು ಹಾಗೂ ಕಾರ್ಪೊರೇಷನ್ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅಭ್ಯರ್ಥಿಗಳ ನೋಂದಣಿ ಮಾಡಿಕೊಳ್ಳುವುದನ್ನು ನಿಷೇಧಿಸಲಾಗಿದೆ.
3. ದ್ವಿತೀಯ ಪದವಿ ಪೂರ್ವ ಪರೀಕ್ಷೆಗೆ ನೇರವಾಗಿ ಹಾಜರಾಗುವ ಖಾಸಗಿ ಅಭ್ಯರ್ಥಿಗಳು ತಾಲ್ಲೂಕು ಕೇಂದ್ರಗಳಲ್ಲಿ ಇಲಾಖೆ ನಿಗದಿಪಡಿಸಿರುವ ಪರೀಕ್ಷಾ ಕೇಂದ್ರಗಳಲ್ಲಿಯೇ ಪರೀಕ್ಷೆಯನ್ನು ತೆಗೆದುಕೊಳ್ಳತಕ್ಕದ್ದು.
4. ಖಾಸಗಿ ಅಭ್ಯರ್ಥಿಗಳಾಗಿ ನೇರವಾಗಿ ದ್ವಿತೀಯ ಪದವಿ ಪೂರ್ವ ಪರೀಕ್ಷೆಗೆ ಹಾಜರಾಗಲು ಅವರ ವಯಸ್ಸು ಆಯಾ ವರ್ಷದ ಮಾರ್ಚ್ 31ಕ್ಕೆ 17 ವರ್ಷ ಪೂರ್ಣವಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಲಿಂಗಯ್ಯ**

ಪಿ.ಆರ್.878

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಜಿ.ಬಿ. ಮಠದ, ಅಂದಿನ ಆಹಾರ ನಿರೀಕ್ಷಕರು, ತಾಲ್ಲೂಕು ಕಛೇರಿ, ಔರಾದ್, ಬೀದರ್ ಜಿಲ್ಲೆ ಇವರ ಮೇಲೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆ ನಡೆಸಿ ದೋಷಮುಕ್ತರನ್ನಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ:**
1. ನಿಬಂಧಕರು, ರಾಜ್ಯ ಲೋಕಾಯುಕ್ತ ಇಲಾಖೆ, ಬೆಂಗಳೂರು ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಕಂಪ್ಲೆಂಟ್: ಉಪಲೋಕ್:ಬಿಜಿಎಲ್‌ಬಿ-103: 98-99: ಎಲ್‌ಆರ್‌ಇ 5, ದಿನಾಂಕ: 23.03.2002.
2. ಸರ್ಕಾರದ ಆದೇಶ ಸಂಖ್ಯೆ: ಆನಾಸ 80 ಕಾಮಾಸೇ 2002, ದಿನಾಂಕ: 29.05.2002.
3. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪತ್ರ ಸಂಖ್ಯೆ: ಲೋಕ್/ ಎಆರ್‌ಇ-4/ ಇಎನ್‌ಕ್ಯೂ-61/ 2002-03, ದಿನಾಂಕ: 26.03.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮಾನ್ಯ ಉಪಲೋಕಾಯುಕ್ತರ ದಿನಾಂಕ: 13.03.2002ರ ವರದಿಯನ್ನು ಕಳುಹಿಸಿ, ಶ್ರೀ ಜಿ.ಬಿ. ಮಠದ, ಆಹಾರ ನಿರೀಕ್ಷಕರು, ತಾಲ್ಲೂಕು ಕಛೇರಿ, ಔರಾದ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಶ್ರೀ ಶೌಕತ್ ಅಲಿ ಬಿನ್ ಖಾಬುಲ್ಸಾಬ್, ಸೀಮೆಎಣ್ಣೆ ವಿತರಕರು ವಡಗಾಂವ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ ಇವರು ಅಂಗಡಿಯಲ್ಲಿ ಸೀಮೆಎಣ್ಣೆಯನ್ನು ಹೆಚ್ಚಿನ ದರಕ್ಕೆ ವ್ಯಾಪಾರ ಮಾಡುವುದರ ಬಗ್ಗೆ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡದಿರಲು ರೂ.500.00 ಗಳನ್ನು ಲಂಚವಾಗಿ ಕೇಳಿರುವುದರಿಂದ ಇವರ ವಿರುದ್ಧ ಲೋಕಾಯುಕ್ತ ಪೊಲೀಸ್, ಬೀದರ್ ಇವರಿಗೆ ನೀಡಿರುವ ದೂರುಗಳನ್ನಾಧರಿಸಿ ನಿರ್ದಿಷ್ಟ ದೂರುಗಳನ್ನು ಒಳಗೊಂಡ ಅರ್ಜಿಯನ್ನು ಪರಿಗಣಿಸಿ ವಿವರವಾದ ತನಿಖೆಯನ್ನು ನಡೆಸಿ ರಾಜ್ಯ ಲೋಕಾಯುಕ್ತ ಇವರಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಲೋಕಾಯುಕ್ತ ನಿಬಂಧಕರು ಈ ಪ್ರಕರಣದಲ್ಲಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(4)ರನ್ವಯ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಬಿ.ಜಿ. ಮಠದ, ಅಂದಿನ ಆಹಾರ ನಿರೀಕ್ಷಕರು, ತಾಲ್ಲೂಕು ಕಛೇರಿ, ಔರಾದ್, ಬೀದರ್ ಜಿಲ್ಲೆ ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮಾನ್ಯ ಉಪಲೋಕಾಯುಕ್ತರವರ ದಿನಾಂಕ: 26.03.2005ರ ಶಿಫಾರಸ್ಸು ಹಾಗೂ ಉಪನಿಬಂಧಕರು, ವಿಚಾರಣೆಗಳು-4 ಇವರ ದಿನಾಂಕ: 24.02.2004ರ ವಿಚಾರಣಾ ವರದಿ ಹಾಗೂ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ ಇವರ ದಿನಾಂಕ: 24.02.2004ರ ವಿಚಾರಣಾ ವರದಿ ಆಧಾರದ ಮೇಲೆ ಮಾನ್ಯ ಉಪಲೋಕಾಯುಕ್ತರು ಶ್ರೀ ಬಿ.ಜಿ. ಮಠದ, ಅಂದಿನ ಆಹಾರ ನಿರೀಕ್ಷಕರು, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ ಅವರ ವಿರುದ್ಧ ಲಂಚ ಸ್ವೀಕೃತ ಆರೋಪವು ವಿಚಾರಣೆಯಲ್ಲಿ ರುಜುವಾತಾಗಿಲ್ಲದಿರುವುದರಿಂದ, ಈ ಪ್ರಕರಣವನ್ನು ಕೈಬಿಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಸರ್ಕಾರವು ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 80 ಇಎಫ್‌ಟಿ 2002, ಬೆಂಗಳೂರು, ದಿನಾಂಕ: 17ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಜಿ.ಬಿ. ಮಠದ, ಅಂದಿನ ಆಹಾರ ನಿರೀಕ್ಷಕರು, ತಾಲ್ಲೂಕು ಕಛೇರಿ, ಔರಾದ್, ಬೀದರ್ ಜಿಲ್ಲೆ ಇವರ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಆನಾಸ 80 ಇಎಫ್‌ಟಿ 2002, ದಿನಾಂಕ: 29.05.2002ರಂತೆ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14-ಎ ರನ್ವಯ ಪ್ರಾರಂಭಿಸಲಾದ ಇಲಾಖಾ ವಿಚಾರಣೆಯನ್ನು ಈ ಮೂಲಕ ಕೈಬಿಟ್ಟು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್.879

ಪೀಠಾಧಿಕಾರಿ, ಆಹಾರ-1, ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸರ್ಕಾರಿ ನರ್ಸಿಂಗ್ ಶಾಲೆಗಳ ಶುಶ್ರೂಷಾ ವಿದ್ಯಾರ್ಥಿಗಳ ಶಿಷ್ಯವೇತನದ ಪರಿಷ್ಕರಣೆ.

**ಓದಲಾಗಿದೆ:** 1. ದಿನಾಂಕ: 09.06.1998ರ ಸಂಖ್ಯೆ: ಆಕುಕ 102 ಎಂಎಸ್‌ಎನ್ 93ರ ಸರ್ಕಾರಿ ಆದೇಶ.

2. ದಿನಾಂಕ: 22.06.2004ರ ಸಂಖ್ಯೆ: ಎನ್‌ಆರ್‌ಸಿ: 69/ 2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದೊಂದಿಗೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪೀಠಿಕೆ:**

1. ದಿನಾಂಕ: 09.06.1998ರ ಆದೇಶದಲ್ಲಿ ಕರ್ನಾಟಕ ರಾಜ್ಯದ ಸರ್ಕಾರಿ ತರಬೇತಿ ಸಂಸ್ಥೆಗಳಲ್ಲಿ ಶುಶ್ರೂಷಾ ತರಬೇತಿ ಪಡೆಯುತ್ತಿರುವ ವಿದ್ಯಾರ್ಥಿ: ವಿದ್ಯಾರ್ಥಿನಿಯರುಗಳ ಶಿಷ್ಯವೇತನವನ್ನು ಪರಿಷ್ಕರಿಸಿ ಮಾಸಿಕವಾಗಿ ಮೂರುನೂರು ರೂ.ಗಳಿಂದ ಐದುನೂರು ರೂ.ಗಳಿಗೆ ಸರ್ಕಾರ ಹೆಚ್ಚಿಸಿದೆ.

2. ಕರ್ನಾಟಕ ಸರ್ಕಾರಿ ಶುಶ್ರೂಷಕರ ಸಂಘವು ರಾಜ್ಯದ ಸರ್ಕಾರಿ ಶುಶ್ರೂಷಾ ಶಾಲೆಗಳಲ್ಲಿನ ವಿದ್ಯಾರ್ಥಿಗಳ ಶಿಷ್ಯವೇತನವನ್ನು 500 ರೂ.ಗಳಿಂದ 1250 ರೂ.ಗಳಿಗೆ ಹೆಚ್ಚಿಸುವಂತೆ ಬೇಡಿಕೆ ಇಟ್ಟಿರುವುದಾಗಿ ತಿಳಿಸಿ, ರಾಜ್ಯದ 11 ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ತರಬೇತಿ ಪಡೆಯುತ್ತಿರುವ ವಿದ್ಯಾರ್ಥಿಗಳ ಶಿಷ್ಯವೇತನವನ್ನು 500 ರೂ.ಗಳಿಂದ 1250 ರೂ.ಗಳಿಗೆ ಹೆಚ್ಚಿಸಿ ಸರ್ಕಾರಿ ಆದೇಶ ಹೊರಡಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 146 ಎಂಎಂಸಿ 2005, ಬೆಂಗಳೂರು, ದಿನಾಂಕ: 30ನೇ ಮೇ, 2005**

3. ಸರ್ಕಾರಿ ನರ್ಸಿಂಗ್ ಶಾಲೆಗಳ ಶುಶ್ರೂಷಾ ವಿದ್ಯಾರ್ಥಿಗಳ ಶಿಷ್ಯವೇತನವನ್ನು 500 ರೂ.ಗಳಿಂದ (ಐದುನೂರು ರೂಪಾಯಿಗಳು) 1000 ರೂ.ಗಳಿಗೆ (ಒಂದು ಸಾವಿರ ರೂಪಾಯಿಗಳು) ದಿನಾಂಕ: 01.06.2005ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

4. ಈ ಪ್ರಸ್ತಾವನೆಗೆ ತಗಲುವ ಹೆಚ್ಚುವರಿ ವೆಚ್ಚವನ್ನು ವೈದ್ಯಕೀಯ ಶಿಕ್ಷಣ ಇಲಾಖೆಗೆ ಒದಗಿಸಿರುವ ಒಟ್ಟಾರೆ ಅನುದಾನದಲ್ಲಿಯೇ ಭರಿಸಬೇಕೆಂಬ ಷರತ್ತಿಗೊಳಪಟ್ಟಿದೆ.

5. ದಿನಾಂಕ: 27.04.2005 ಸಂಖ್ಯೆ: ಆಇ 474 ವೆಚ್ಚ-5/2005ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್.881

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮೈಸೂರು ಅಜೆಂಡಾ ಟಾಸ್ಕ್ ಫೋರ್ಸ್ ಸದಸ್ಯತ್ವದಿಂದ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಡಾ: ವಿ. ಪ್ರಕಾಶ್, ನಿರ್ದೇಶಕರು, ಸೆಂಟ್ರಲ್ ಫುಡ್ ಟೆಕ್ನಾಲಜಿಕಲ್ ರೀಸರ್ಚ್ ಇನ್ಸ್ಟಿಟ್ಯೂಟ್, ಮೈಸೂರು ಇವರ ದಿನಾಂಕ: 28.11.2004ರ ರಾಜೀನಾಮೆ ಪತ್ರ.

2. ಸರ್ಕಾರಿ ಆದೇಶ ಸಂಖ್ಯೆ: ನಅಇ 65 ಎಸಿಎಂ 2001, ದಿನಾಂಕ: 20.11.2001.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡಾ: ವಿ. ಪ್ರಕಾಶ್, ನಿರ್ದೇಶಕರು, ಸೆಂಟ್ರಲ್ ಫುಡ್ ಟೆಕ್ನಾಲಜಿಕಲ್ ರೀಸರ್ಚ್ ಇನ್ಸ್ಟಿಟ್ಯೂಟ್, ಮೈಸೂರು ಇವರು ಪ್ರಸ್ತುತ ತಾವು ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯ ಜೊತೆ ಎಂ.ಎ.ಟಿ.ಎಫ್. ಸಭೆಗೆ ಕೆಲಸದ ಒತ್ತಡದಿಂದ ಹಾಜರಾಗಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಎಂ.ಎ.ಟಿ.ಎಫ್. ಸದಸ್ಯತ್ವದಿಂದ ಬಿಡುಗಡೆಗೊಳಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 60, ಎಸಿಎಂ, 2005, ಬೆಂಗಳೂರು, ದಿನಾಂಕ: 17ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ನಅಇ 65 ಎಸಿಎಂ 2001 ದಿನಾಂಕ: 20.11.2001ರ ಕ್ರ.ಸಂ.10ರಲ್ಲಿ ಡಾ: ವಿ. ಪ್ರಕಾಶ್, ಡೈರೆಕ್ಟರ್, ಸೆಂಟ್ರಲ್ ಫುಡ್ ಟೆಕ್ನಾಲಜಿ ರೀಸರ್ಚ್ ಇನ್ಸ್ಟಿಟ್ಯೂಟ್, ಮೈಸೂರು ಇವರನ್ನು ಮೈಸೂರು ಅಜೆಂಡಾ ಟಾಸ್ಕ್‌ಫೋರ್ಸ್ ಸದಸ್ಯತ್ವದಿಂದ ತಕ್ಷಣದಿಂದ ಜಾರಿಗೆ ಬರುವಂತೆ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್‌ಕುಮಾರ್**

ಪಿ.ಆರ್.882

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ENERGY SECRETARIAT

**Sub:** Cancellation of 2.5 MW Wind Power capacity order made in favour of M/s Kurumardikere Energy Limited at Kurumardikere village, Chitradurga district-reg.

**Read:** 1. Government order No.DE 280 NCE 2004 Dated: 25.10.2004.

2. Letter No. KRED/ 08/KEL/2005/1030 Dated: 14.06.2005 received from MD, KREDL, Bangalore.

**Preamble:**

In the Government Order read at (1) above, sanction has been accorded to M/s Kurumardikere Energy Limited to enhance the Wind Power capacity from 12.5 MW to 15MW at Kurumardikere village Chitradurga District.

In the letter read at (2) above the Managing Director, Karnataka Renewable Energy Development Limited, Bangalore has stated that M/s Kurumardikere Energy Limited has expressed their practical difficulty to implement the enhanced 2.5 MW Wind Power capacity in the area earmarked for Project, and recommended to cancel the enhanced 2.5MW capacity made in favour of M/s Kurumardikere Energy Limited.

After examining the proposal at the Government level, hence the following order.

**Government Order No. EN 173 NCE 2005, Bangalore, Dated: 22nd June, 2005**

The 2.5 MW enhanced capacity of Wind Power Project allotted to M/s. Kurumardikere Energy Limited, Kurumardikere village, Chitradurga District vide Govt. Order No. DE 280 NCE 2004 Dated: 25.10.2004 is hereby cancelled and the earlier allotment of 12.5 MW Wind Power Project will be retained as it is with immediate effect.

By Order and in the name of the Governor of Karnataka,
**SURESH B. KRISHNAPPANAVAR**
Under Secretary to Government,
Energy Department.

PR-883

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 2004ನೇ ಸಾಲಿನ "ಶಾಂತಲಾ ನಾಟ್ಯ ಪ್ರಶಸ್ತಿ" ಯನ್ನು ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 277 ಕಸಧ 2004, ದಿನಾಂಕ: 28.12.2004.

2. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪತ್ರ ಸಂಖ್ಯೆ: ಕಸನಿ:ಶಾಂನಪ್ರ: 9: 2004-05, ದಿನಾಂಕ: 20.04.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2004ನೇ ಸಾಲಿನ "ಶಾಂತಲಾ ನಾಟ್ಯ" ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ: 01.04.2005ರಂದು ಮತ್ತು ದಿನಾಂಕ: 13.04.2005 ರಂದು ಸದರಿ ಆಯ್ಕೆ ಸಮಿತಿಯು ಸಭೆ ಸೇರಿ 2004ನೇ ಸಾಲಿನ "ಶಾಂತಲಾ ನಾಟ್ಯ" ಪ್ರಶಸ್ತಿಗೆ ನೃತ್ಯ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿರುವ ಶ್ರೀಮತಿ ಜಯಲಕ್ಷ್ಮಿ ಆಳ್ವ, ಮಂಗಳೂರು ಅವರನ್ನು ಒಮ್ಮತದಿಂದ ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತದೆ. ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಸರ್ಕಾರದ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 277 ಕಸಧ 2004, ಬೆಂಗಳೂರು, ದಿನಾಂಕ: 6ನೇ ಜೂನ್, 2005**

2004ನೇ ಸಾಲಿನ "ಶಾಂತಲಾ ನಾಟ್ಯ" ಪ್ರಶಸ್ತಿಗೆ ನೃತ್ಯ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿರುವ ಶ್ರೀಮತಿ ಜಯಲಕ್ಷ್ಮಿ ಆಳ್ವ, ಮಂಗಳೂರು ಇವರನ್ನು ಸರ್ಕಾರ ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಷಾ ಗಣೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.890

**ವಿಷಯ:** 2004ನೇ ಸಾಲಿನ "ಬಸವ ಪುರಸ್ಕಾರ" ರಾಷ್ಟ್ರೀಯ ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 78 ಕಗೌಧ 2004, ದಿನಾಂಕ: 23.04.2005.

2. ದಿನಾಂಕ: 26.04.2005ರಂದು ನಡೆದ ಸಭೆಯ ನಿರ್ಣಯಗಳು.

**ಪ್ರಸ್ತಾವನೆ:**

2004ನೇ ಸಾಲಿನ "ಬಸವ ಪುರಸ್ಕಾರ, ರಾಷ್ಟ್ರೀಯ ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಶ್ರೀ ಹೆಚ್.ಎಸ್. ದೊರೆಸ್ವಾಮಿ ರವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ರಚಿಸಲಾಗಿತ್ತು. ಶ್ರೀ ಬಸವೇಶ್ವರರು ಪ್ರತಿಪಾದಿಸಿದ ಸರ್ವಧರ್ಮ ಸಮನ್ವಯ ಮಾನವೀಯ ಸೇವೆ, ಸಮಾಜ ಸುಧಾರಣಾ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿರುವ ಶ್ರೀಮತಿ ಸುಶೀಲಮ್ಮ ಸುಮಂಗಲಿ ಸೇವಾಶ್ರಮ ಸಂಸ್ಥೆ, ಬೆಂಗಳೂರು ರವರನ್ನು "ಬಸವ ಪುರಸ್ಕಾರ" ರಾಷ್ಟ್ರೀಯ ಪ್ರಶಸ್ತಿಗೆ ಸರ್ವಾನುಮತದಿಂದ ಸದರಿ ಸಮಿತಿಯು ಆಯ್ಕೆ ಮಾಡಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 196 ಕಸಧ 2005, ಬೆಂಗಳೂರು, ದಿನಾಂಕ: 6ನೇ ಜೂನ್, 2005**

ಶ್ರೀ ಬಸವೇಶ್ವರರು ಪ್ರತಿಪಾದಿಸಿದ ಸರ್ವಧರ್ಮ ಸಮನ್ವಯ, ಮಾನವೀಯ ಸೇವೆ, ಸಮಾಜ ಸುಧಾರಣಾ ಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸುವ ಮೂಲಕ ನಾಡಿನ ಸಮಾಜ ಸೇವಾ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿರುವ ಶ್ರೀಮತಿ ಸುಶೀಲಮ್ಮ ಸುಮಂಗಲಿ ಸೇವಾ ಸಂಸ್ಥೆ, ಬೆಂಗಳೂರು ರವರನ್ನು 2004ನೇ ಸಾಲಿನ "ಬಸವ ಪುರಸ್ಕಾರ" ರಾಷ್ಟ್ರೀಯ ಪ್ರಶಸ್ತಿಗೆ ಸರ್ಕಾರವು ಆಯ್ಕೆ ಮಾಡಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಷಾ ಗಣೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.891

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್.ಕೆ. ಹೊರ್ತೀಕರ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 78 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ಶ್ರೀ ಹೆಚ್.ಕೆ. ಹೊರ್ತೀಕರ್, ನಿವೃತ್ತ ಮುಖ್ಯ ಇಂಜಿನಿಯರ್ ಅವರು ಮುಖ್ಯ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹಗರಿ ಸೇತುವೆ ಸುಂಕ ಸಂಗ್ರಹಣಾ ಕಾಮಗಾರಿ ಗುತ್ತಿಗೆಯ ಗುತ್ತಿಗೆದಾರರಿಗೆ ಕಡಿಮೆ ದಂಡ ವಿಧಿಸಿ ಕರ್ತವ್ಯ ಲೋಪವೆಸಗುವ ಮೂಲಕ ಸರ್ಕಾರಕ್ಕೆ ಅಪಾರ ಆರ್ಥಿಕ ನಷ್ಟ ಉಂಟುಮಾಡಿದ್ದು ಹಾಗೂ ಕರಾರಿನಂತೆ, ಕ್ರಮ ಜರುಗಿಸದೆ, ಕರಾರಿನಲ್ಲಿನ ಷರತ್ತನ್ನು ಉದ್ದೇಶಪೂರ್ವಕವಾಗಿ ಉಲ್ಲಂಘಿಸಿದ ಆರೋಪಕ್ಕೆ ಕಾರಣರಾಗಿ ತೀವ್ರ ದುರ್ನಡತೆ ಎಸಗಿರುವುದು ಕಂಡು ಬರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಹೆಚ್.ಕೆ. ಹೊರ್ತೀಕರ್, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್.ಕೆ. ಹೊರ್ತೀಕರ್ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 892

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ ಅಥಣಿ ತಾಲ್ಲೂಕು ಕೊಕಟನೂರು ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ:23.03.2005ರ ಪತ್ರ ಸಂ:ಮುಇಂ/ಸನೀ(ಉ)/ಬಿಜೆಪಿ/ಭೂಸ್ವಾ/ ಕೊಕಟನೂರು/04–05/1495.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:23.03.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬೆಳಗಾಂ ಜಿಲ್ಲೆ ಅಥಣಿ ತಾಲ್ಲೂಕು ಕೊಕಟನೂರು ಗ್ರಾಮದ ಹದ್ದಿಯಲ್ಲಿ(ಯಲ್ಲಮ್ಮನವಾಡಿ) ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಅಥಣಿಯ ಮಾನ್ಯ ಸಿವಿಲ್ ನ್ಯಾಯಾಲಯದ(ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.23,20,875.00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಅಥಣಿ ತಾಲ್ಲೂಕಿನ ಕೊಕಟನೂರು ಗ್ರಾಮದ ಹದ್ದಿಯಲ್ಲಿ (ಯಲ್ಲಮ್ಮನವಾಡಿ) ಸಣ್ಣ ನೀರಾವರಿ ಕೆರೆ ನಿರ್ಮಾಣ ಮಾಡಲು ಅಗತ್ಯವಿದ್ದ 38.34 ಎಕರೆ ಜಮೀನಿನ ಸ್ವಾಧೀನಕ್ಕಾಗಿ ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ:26.11.1987ರಲ್ಲಿ ಹಾಗೂ ಕಲಂ 6(1) ರಡಿ ಅಧಿಸೂಚನೆಯನ್ನು ದಿನಾಂಕ:25.08.1988ರಂದು ಹೊರಡಿಸಿ ಭೂಪರಿಹಾರದ ಐತೀರ್ಪನ್ನು ದಿನಾಂಕ:29.02.1989ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ. ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರನ್ವಯ ಅಥಣಿಯ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿ ಮಾನ್ಯ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಸರ್ಕಾರ ನಿರ್ಧರಿಸಿರುವುದರಿಂದ ಕೆಳಕಂಡ ಪ್ರಕರಣಗಳಲ್ಲಿ ಹೆಚ್ಚಿನ ಪರಿಹಾರಧನ ಪಾವತಿಸಲು ನಿರ್ಧರಿಸಿ ಆದೇಶ ಹೊರಡಿಸಲಾಗಿದೆ.

| ಕ್ರ. ಸಂ. | ಎಲ್.ಎ.ಸಿ ಪ್ರಕರಣ ಸಂ. | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರಮೊತ್ತ ರೂ.ಗಳಲ್ಲಿ |
|---|---|---|---|---|
| 1. | 33/1990 | 965, 966 | 01–02 | 42403.00 |
| 2. | 34/1990 | 972 | 00–03 | 3026.00 |
| 3. | 35/1990 | 968/1ಎ, ಬಿ | 00–26 | 26248.00 |
| 4. | 36/1990 | 968/2ಎ | 00–10 | 10093.00 |
| 5. | 37/1990 | 968/2ಬಿ, 968/3ಎ | 00–36 | 36342.00 |
| 6. | 39/1990 | 967/1, 967/2ಎ,967/2ಬಿ | 00–17 | 17051.00 |
| 7. | 40/1990 | 1023 | 01–09 | 49469.00 |
| 8. | 41/1990 | 1033 | 00–16 | 16151.00 |
| 9. | 42/1990 | 1034/1 | 00–25 | 25238.00 |
| 10. | 43/1990 | 1035/1 | 00–30 | 30251.00 |
| 11. | 44/1990 | 1032 | 01–01 | 41573.00 |
| 12. | 45/1990 | 1031 | 01–15 | 55767.00 |
| 13. | 46/1990 | 1030/1, 1030/2 | 00–26 | 26248.00 |

| ಕ್ರ. ಸಂ. | ಎಲ್.ಎ.ಸಿ ಪ್ರಕರಣ ಸಂ. | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರಮೊತ್ತ ರೂ.ಗಳಲ್ಲಿ |
|---|---|---|---|---|
| 14. | 47/1990 | 1057/1 | 01–01 | 41573.00 |
| 15. | 48/1990 | 1089/1 | 00–23 | 23321.00 |
| 16. | 49/1990 | 1089/2ಎ, 1089/2ಬಿ | 00–21 | 21292.00 |
| 17. | 51/1990 | 1088, 1083/2 | 01–39 | 80388.00 |
| 18. | 52/1990 | 1087 | 01–00 | 43935.00 |
| 19. | 53/1990 | 1148/1ಎ,1148/1ಬಿ,1148/1ಸಿ | 00–11 | 11011.00 |
| 20. | 54/1990 | 1148/2ಎ,1148/2ಬಿ1,1148/2ಬಿ2 | 00–38 | 35739.00 |
| 21. | 55/1990 | 1147/1 1147/2 | 00–20 | 20388.00 |
| 22. | 56/1990 | 1146/1, 1146/2 | 00–24 | 26361.00 |
| 23. | 57/1990 | 1097 | 00–15 | 16143.00 |
| 24. | 58/1990 | 1098 | 00–28 | 30136.00 |
| 25. | 59/1990 | 1099/1, 1099/2 | 00–18 | 19375.00 |
| 26. | 60/1990 | 1124 | 00–24 | 26361.00 |
| 27. | 61/1990 | 1125/2 | 00–03 | 3026.00 |
| 28. | 62/1990 | 914 | 09–24 | 404378.00 |
| 29. | 63/1990 | 958 | 08–28 | 366455.00 |
| 30. | 64/1990 | 1096/2, 3 | 00–27 | 27257.00 |
| 31. | 65/1990 | 1142 | 00–12 | 12823.00 |
| | | | **ಒಟ್ಟು:** | **1589822.00** |

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ:ಸನೀಇ 105 ಭೂಸ್ವಾಪ್ರ 2005,ಬೆಂಗಳೂರು, ದಿನಾಂಕ:16ನೇ ಜೂನ್, 2005**

ಬೆಳಗಾಂ ಜಿಲ್ಲೆ ಅಥಣಿ ತಾಲ್ಲೂಕು ಕೊಕಟನೂರು ಗ್ರಾಮದ ಹದ್ದಿಯಲ್ಲಿ(ಯಲ್ಲಮ್ಮನವಾಡಿ) ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಅಥಣಿಯ ಮಾನ್ಯ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಹೆಚ್ಚಿಸಿರುವ ಪರಿಹಾರಧನ ರೂ.15,89,822.00(ಹದಿನೈದು ಲಕ್ಷದ ಎಂಭತ್ತೊಂಭತ್ತು ಸಾವಿರದ ಎಂಟುನೂರ ಇಪ್ಪತ್ತೆರಡು ರೂಪಾಯಿಗಳು ಮಾತ್ರ)ಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಎಲ್.ಎ.ಸಿ. ಪ್ರಕರಣವಾರು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಳ್ಳತಕ್ಕದ್ದು.

ಈ ವೆಚ್ಚವನ್ನು 2005–06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಕ್ಕಾಗಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ:12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಮಂಜುನಾಥ**

ಪಿ.ಆರ್. 855

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ವರ್ಗಾಯಿಸಿದ್ದ "ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ಎಲೆಮಲ್ಲಪ್ಪ ಶೆಟ್ಟಿ ಕೆರೆಯಿಂದ ಹೊಸಕೋಟೆ ದೊಡ್ಡ ಕೆರೆಗೆ ಏತ ನೀರಾವರಿ ಯೋಜನೆ" ಕಾಮಗಾರಿಯನ್ನು ಸಣ್ಣ ನೀರಾವರಿ ವ್ಯಾಪ್ತಿಗೆ ಹಿಂಪಡೆಯುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಸನೀಇ 218 ಕೆಜಿದು 2003 ದಿನಾಂಕ 10/05/2004.

**ಪ್ರಸ್ತಾವನೆ:**

ಕಾವೇರಿ ಜಲಾನಯನ ಪ್ರದೇಶದಲ್ಲಿ ಬರುವ ಕೆಲವೊಂದು ಸಣ್ಣ ನೀರಾವರಿ ಕಾಮಗಾರಿಗಳನ್ನು ಅನುದಾನದ ಕೊರತೆಯಿಂದಾಗಿ ಸಣ್ಣ ನೀರಾವರಿ ಇಲಾಖೆಯಿಂದ ನಿರ್ಮಿಸಲು ಸಾಧ್ಯವಾಗುವುದಿಲ್ಲವೆಂಬ ಕಾರಣದಿಂದ 29 ಕಾಮಗಾರಿಗಳನ್ನು ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ 10/05/2004ರ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿದೆ. ಹೀಗೆ ಹಸ್ತಾಂತರಿಸಲಾದ ಕಾಮಗಾರಿಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ "ಎಲೆಮಲ್ಲಪ್ಪ ಶೆಟ್ಟಿ ಕೆರೆಯಿಂದ ಹೊಸಕೋಟೆ ದೊಡ್ಡಕೆರೆಗೆ ಏತ ನೀರಾವರಿ ಯೋಜನೆ" ಕಾಮಗಾರಿಯು ಸೇರಿದೆ.

ಸದರಿ ಏತ ನೀರಾವರಿ ಯೋಜನೆಗೆ ಸಣ್ಣ ನೀರಾವರಿ ಇಲಾಖೆಯು ನಬಾರ್ಡ್‌ನ ಆರ್.ಐ.ಡಿ.ಎಫ್. ಯೋಜನೆಯಡಿಯಲ್ಲಿ ಸಾಲ ಸೌಲಭ್ಯ ಪಡೆಯುವ ಮೂಲಕ ಅನುದಾನ ಒದಗಿಸಿಕೊಳ್ಳಲು ಕ್ರಮ ಕೈಗೊಂಡಿರುವುದರಿಂದ, ಈ ಯೋಜನೆಯನ್ನು ಸಣ್ಣ ನೀರಾವರಿ ಇಲಾಖೆಯ ವತಿಯಿಂದಲೇ ಕೈಗೊಳ್ಳಲು ಉದ್ದೇಶಿಸಿ ಕಾವೇರಿ ನೀರಾವರಿ ನಿಗಮಕ್ಕೆ ವರ್ಗಾಯಿಸಿದ್ದ ಈ ಯೋಜನೆಯನ್ನು ಹಿಂಪಡೆಯಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 141 ಕೆಜಿದು 2004, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ದಿನಾಂಕ 10/05/2004ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 218 ಕೆಜಿದು 2003ರಲ್ಲಿ ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸಲಾಗಿದ್ದ ಸಣ್ಣ ನೀರಾವರಿಯ 29 ಕಾಮಗಾರಿಗಳ ಪೈಕಿ "ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ಎಲೆಮಲ್ಲಪ್ಪ ಶೆಟ್ಟಿ ಕೆರೆಯಿಂದ ಹೊಸಕೋಟೆ ದೊಡ್ಡಕೆರೆ ಏತ ನೀರಾವರಿ ಯೋಜನೆ ಕಾಮಗಾರಿಯನ್ನು" ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಉದ್ದೇಶಿಸಿರುವುದರಿಂದ ಈ ಕಾಮಗಾರಿಯನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಿಂದ ಸಣ್ಣ ನೀರಾವರಿ ಇಲಾಖೆಗೆ ಹಿಂಪಡೆಯಲು ಸರ್ಕಾರವು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಮಂಜುನಾಥ**

ಪಿ.ಆರ್. 856

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ : ಉಪ ವಿಭಾಗದ ಅವ್ಯವಹಾರದ ಬಗ್ಗೆ ಜಂಟಿ ಇಲಾಖಾ ವಿಚಾರಣೆ - ಮಂಡನಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ -ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ. ಗ್ರಾಅಪ:186 :ಜಿಪಅ:02, ದಿ. 11-2-03.
2. ಸರ್ಕಾರಿ ಆದೇಶ ಸಂ. ಗ್ರಾಅಪ:186:ಜಿಪಅ:02, ದಿ. 11-07-03.
3. ಸರ್ಕಾರಿ ಆದೇಶ ಸಂ. ಗ್ರಾಅಪ:186:ಜಿಪಅ:02, ದಿ. 26-5-04.

**ಪ್ರಸ್ತಾವನೆ:**

ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ : ಉಪ ವಿಭಾಗದ ವ್ಯಾಪ್ತಿಯಲ್ಲಿನ ಕಾಮಗಾರಿಗಳ ಅವ್ಯವಹಾರದಲ್ಲಿ ಭಾಗಿಗಳೆನ್ನಲಾದ ಶ್ರೀ ಸಿ. ಅನಂತರಾಮು , ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಡುಪಿ , ಶ್ರೀ ಟಿ.ಆರ್.ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ.ಜಿ.ತಿಮ್ಮೆಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ), ಶ್ರೀ ರಘುರಾಮಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಜಿಲ್ಲಾಧಿಕಾರಿಯವರು, ಉಡುಪಿ ಜಿಲ್ಲೆ, ಉಡುಪಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ , ಪ್ರಾಜೆಕ್ಟ್ ಡೈರೆಕ್ಟರ್ : ಆಫೀಸರ್ (ಡಿಆರ್‌ಡಿಎ) ಜಿಲ್ಲಾ ಪಂಚಾಯತ್, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಮೇಲೆ ಓದಲಾದ ಕ್ರ.ಸಂ.(1) ರಲ್ಲಿ ಸರ್ಕಾರವು ಆದೇಶಿಸಿತ್ತು.

ನಂತರ, ಈ ಪ್ರಕರಣವನ್ನು ಉಡುಪಿ ಜಿಲ್ಲಾಧಿಕಾರಿಗಳಿಂದ ಹಿಂಪಡೆದು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಶ್ರೀ ಉಮೇಶ್‌ಶೆಟ್ಟಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ ಕ್ರ.ಸಂ.(2)ರ ಪ್ರಕಾರ ಆದೇಶ ಹೊರಡಿಸಲಾಗಿತ್ತು. ನಿಗದಿತ ಸಂಭಾವನೆಗೆ ಈ ವಿಚಾರಣೆ ನಡೆಸಲು ಅವರು ಇಚ್ಛಿಸದಿದ್ದರಿಂದ ಪ್ರಕರಣವನ್ನು ಅವರಿಂದ ಹಿಂಪಡೆದು ಈ ಪ್ರಕರಣದಲ್ಲಿ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (22) ರ ಅನ್ವಯ ಶ್ರೀ ಎಸ್.ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಹಾಗೂ ಪ್ರಾಜೆಕ್ಟ್ ಡೈರೆಕ್ಟರ್, (ಡಿಆರ್‌ಡಿಎ), ಜಿ.ಪಂ. ಉಡುಪಿ ಇವರೇ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಮುಂದುವರೆಯಲು ಮೇಲೆ ಓದಲಾದ ಕ್ರ.ಸಂ.(3) ರಲ್ಲಿ ಸರ್ಕಾರವು ಆದೇಶಿಸಿತ್ತು.

ಮಂಡನಾಧಿಕಾರಿಯವರು ಈ ಪ್ರಕರಣದಲ್ಲಿ ವಿಚಾರಣೆಯ ದಿನಾಂಕಗಳಂದು ಹಾಜರಾಗದೆ ವಿಳಂಬ ಮಾಡುತ್ತಿರುವುದರಿಂದ ಇವರನ್ನು ಬದಲಾಯಿಸಿ ಬೇರೆ ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ ಶಿಸ್ತು ಪ್ರಾಧಿಕಾರವಾದ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ: 186 ಜಿಪಅ: 02, ಬೆಂಗಳೂರು, ದಿನಾಂಕ: 15ನೇ ಜೂನ್, 2005**

ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ : ಉಪ ವಿಭಾಗದ ವ್ಯಾಪ್ತಿಯಲ್ಲಿನ ಕಾಮಗಾರಿಗಳ ಅವ್ಯವಹಾರದಲ್ಲಿ ಭಾಗಿಗಳೆನ್ನಲಾದ ಶ್ರೀ ಸಿ. ಅನಂತರಾಮು , ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಡುಪಿ , ಶ್ರೀ ಟಿ.ಆರ್.ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ.ಜಿ.ತಿಮ್ಮೆಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) , ಶ್ರೀ ರಘುರಾಮಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ಜಂಟಿ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳ ಮುಂದೆ ಪ್ರಕರಣವನ್ನು ಮಂಡಿಸಲು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ-11 (5) ರೀತ್ಯ ಈ ಪ್ರಕರಣದಲ್ಲಿ ಪ್ರಾಜೆಕ್ಟ್ ಡೈರೆಕ್ಟರ್, (ಡಿಆರ್‌ಡಿಎ), ಜಿ.ಪಂ. ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದ್ದ ದಿ. 11-2-03 ರ ಆದೇಶವನ್ನು ಮಾರ್ಪಡಿಸಿ , ಈ ಪ್ರಕರಣದಲ್ಲಿ ಉಪ ಕಾರ್ಯದರ್ಶಿ, (ಆಡಳಿತ) ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ, ಮಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿ ಆದೇಶಿಸಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಎಸ್.ಸಿ. ಸುಂದರ**

ಪಿ.ಆರ್.893

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ವಿಷಯ:** ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಜಿಲ್ಲಾ ಮೇಲ್ವಿಚಾರಣಾ ಘಟಕ, ಶಿವಮೊಗ್ಗ ಇವರ ವಿರುದ್ಧ ಇಲಾಖಾ ವಿಚಾರಣೆ ನಂತರ ದಂಡನೆ ವಿಧಿಸುವ ಬಗ್ಗೆ- ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ರವರ ಪತ್ರ ಸಂ. ಅ.ಸ.ಪ.ಸಂ: ಜಿಪಂಶಿ:ಉಕಾ-2:ಗ್ರಾನೀಸ:ವಿ.ಬಾ.ಯೋ. ಶಿಸ್ತುಕ್ರಮ : 2001-02, ದಿ: 25-2-2001.
2. ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 2001, ದಿ. 26-2-2001.
3. ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರ ದಿ. 11-3-2001 ರ ರಕ್ಷಣಾ ಹೇಳಿಕೆ.
4. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 2001, ದಿ. 26-1-2001
5. ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರ ಮನವಿ, ದಿ. 3-10-01.
6. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 2001, ದಿ. 5-2-2001.
7. ವಿಚಾರಣಾಧಿಕಾರಿಯವರ ವರದಿಯ ದಿ. 23-2-04.
8. 2ನೇ ಕಾರಣ ಕೇಳುವ ನೋಟೀಸಿನ ದಿ. 29-5-04.
9. ಆಪಾದಿತರ ಲಿಖಿತ ಹೇಳಿಕೆ ದಿ. 18-6-04.
10. ಸರ್ಕಾರದ ಪತ್ರದ ಸಮ ಸಂಖ್ಯೆ ದಿ. 15-2-05.
11. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ , ಬೆಂಗಳೂರು ಇವರ ಪತ್ರ ಸಂಖ್ಯೆ. ಪಿಎಸ್‌ಸಿ: 157:ಸಿಎಸ್‌ಎಸ್:04, ದಿ. 1-4-2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ವರದಿಯಲ್ಲಿ ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರು ಜಿಲ್ಲಾ ಯೋಜನಾ ಮೇಲ್ವಿಚಾರಣಾ ಘಟಕ, ಶಿವಮೊಗ್ಗ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ಕೈಗೊಳ್ಳಲಾದ ಸಮಗ್ರ ಗ್ರಾಮೀಣ ನೀರು ಸರಬರಾಜು ಯೋಜನೆಯ ಕಾಮಗಾರಿಗಳನ್ನು ಕೋಣಂದೂರು ಗ್ರಾಮದ ನೀರು ಸರಬರಾಜು ಯೋಜನೆಯಲ್ಲಿ 670 ಮೀಟರ್ ಉದ್ದದ 90 ಎಂಎಂ ಅಳತೆಯ ಪೈಪ್‌ಗಳನ್ನು ಗುತ್ತಿಗೆದಾರರು ಅಳವಡಿಸದೇ ಇದ್ದರೂ ಸಹ ಪಿ.ವಿ.ಸಿ. ಪೈಪ್‌ಗಳನ್ನು ಅಳವಡಿಸಲಾಗಿದೆ ಎಂದು ಗುತ್ತಿಗೆದಾರರಿಗೆ ಹಣ ಪಾವತಿಸಿರುವ, ರಿಬ್ಬನ್‌ಪೇಟೆ, ಶಿಗ್ಗಾಂ, ಕುರವಳ್ಳಿ, ಕೆಳದಿ, ಚಂದ್ರಗುತ್ತಿ, ಹರಮಘಟ್ಟ ಗ್ರಾಮದ ಕಾಮಗಾರಿಗಳನ್ನು ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಿಲ್ಲವೆಂದೂ ಹಾಗೂ ಮಾನ್ಯ ಮುಖ್ಯ ಮಂತ್ರಿಯವರು ದಿ. 18-9-2000 ರಂದು ಭೇಟಿ ನೀಡಿ ಈ ಯೋಜನೆಯ ಪ್ರಗತಿ ತೃಪ್ತಿಕರವಾಗಿಲ್ಲವೆಂದು ವ್ಯಕ್ತಪಡಿಸಿ, ನ್ಯೂನ್ಯತೆಗಳನ್ನು ಕೂಡಲೇ ಸರಿಪಡಿಸಲು ನಿರ್ದೇಶಿಸಿದ್ದಾರೆಂದೂ, ಈ ಯೋಜನೆಯ ಉನ್ನತ ಮಟ್ಟದ ಸಮಿತಿಯು ಸ್ಥಳ ತನಿಖೆ ಮಾಡಿ, ಕಾಮಗಾರಿಯ ಲೋಪದೋಷಗಳನ್ನು ಗುರ್ತಿಸಿದೆಯೆಂದೂ ಹಾಗಾಗಿ ಈ ಅಧಿಕಾರಿಯು ಕರ್ತವ್ಯ ನಿರ್ಲಕ್ಷತೆ ತೋರಿದ್ದರ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 11 ರ ಅಡಿಯಲ್ಲಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಕರಡು ಆರೋಪ ಪಟ್ಟಿ (ಅನುಬಂಧ-1 ರಿಂದ 4) ಕಳುಹಿಸಿದ್ದರು.

ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರ ಮೇಲೆ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿ. 26-2-2001 ರ ಪತ್ರದಲ್ಲಿ ಕಾರಣ ಕೇಳುವ ನೋಟೀಸ್‌ನೊಂದಿಗೆ ಅನುಬಂಧ-1 ರಿಂದ 4 ರಂತೆ ಆಪಾದಿತ ಅಧಿಕಾರಿ ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ರವರಿಗೆ ಆರೋಪ ಪಟ್ಟಿ ಜಾರಿಯಾಗಿತ್ತು.

ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ. 11-3-2001 ರ ಲಿಖಿತ ಹೇಳಿಕೆಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರು ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿದ್ದರಿಂದ ಇವರ ವಿರುದ್ಧ ಮಾಡಲಾದ ಆಪಾದನೆಗಳ ಸತ್ಯಾಸತ್ಯತೆಯನ್ನರಿಯುವ ಸಲುವಾಗಿ ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂ. (4) ರ ಆದೇಶದಲ್ಲಿ ನೇಮಿಸಲಾಗಿತ್ತು. ಆದರೆ, ಶ್ರೀ ಎನ್.ಎಸ್. ಹೊಳೀಮಠ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರು ವಿಚಾರಣಾಧಿಕಾರಿಯನ್ನು ಬದಲಿಸಬೇಕೆಂದು ಕೋರಿ ಮೇಲೆ ಓದಲಾದ ಕ್ರಮ ಸಂ.(5) ರಲ್ಲಿ ಕೋರಿದ್ದರು. ನಂತರ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂ. (6) ರ ಆದೇಶದಲ್ಲಿ ನೇಮಿಸಲಾಗಿತ್ತು.

ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಿ , ಕೆಲವು ಆಪಾದನೆಗಳು ಆಪಾದಿತರ ಕರ್ತವ್ಯ ನಿರ್ಲಕ್ಷದಿಂದಲೇ ಅನಾವಶ್ಯಕವಾಗಿ ಖರ್ಚಾಗಿದೆ ಎಂದು ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಪ್ರಕಾರ ವರದಿ ಸಲ್ಲಿಸಿದ್ದರು.

ಸರ್ಕಾರವು ಪರಿಶೀಲಿಸಿ ಇವರಿಗೆ ದಂಡನೆ ವಿಧಿಸುವ ಮುನ್ನ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ ಕ್ರಮ ಸಂ. (8) ರ ಪ್ರಕಾರ ಜಾರಿ ಮಾಡಲಾಗಿತ್ತು.

ಆಪಾದಿತರು ಲಿಖಿತ ಹೇಳಿಕೆ ಸಲ್ಲಿಸಿ, ಇಲಾಖಾ ವಿಚಾರಣಾ ವರದಿಯ ಪ್ರಕಾರ ತಮ್ಮ ಮೇಲಿನ ದೃಢಪಟ್ಟ ಆಪಾದನೆಗಳನ್ನು ನಿರಾಕರಿಸಿ , ಸದರಿ ಆರೋಪಗಳಿಂದ ಮುಕ್ತಗೊಳಿಸಲು ಮೇಲೆ ಓದಲಾದ ಕ್ರಮ ಸಂ. (9) ರ ಪತ್ರದಲ್ಲಿ ಕೋರಿರುತ್ತಾರೆ.

ಆಪಾದಿತರ ಲಿಖಿತ ಹೇಳಿಕೆಯನ್ನು ಪರಿಗಣಿಸಲು ಹೊಸ ಅಂಶಗಳು ಇಲ್ಲದಿರುವುದರಿಂದ ಸರ್ಕಾರವು ನಿವೃತ್ತ ಅಧಿಕಾರಿಯಾದ ಇವರಿಂದ ಸರ್ಕಾರಕ್ಕೆ ಉಂಟಾದ ನಷ್ಟವನ್ನು ಭರಿಸಲು ಕರ್ನಾಟಕ ನಾಗರೀಕ ಸೇವಾ ನಿಯಮ 214 ರನ್ವಯ ಇವರ ನಿವೃತ್ತಿ ವೇತನದ ಶೇಕಡಾ 5 ರಷ್ಟನ್ನು ಒಂದು ವರ್ಷದ ಅವಧಿಗೆ ತಡೆ ಹಿಡಿಯುವ ದಂಡನೆಯನ್ನು ವಿಧಿಸಲು ನಿರ್ಣಯಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ ಕ್ರಮ ಸಂ. (10) ರ ಪ್ರಕಾರ ಕೋರಲಾಗಿ , ಆಯೋಗವು ತನ್ನ ಅಭಿಪ್ರಾಯವನ್ನು ಮೇಲೆ ಓದಲಾದ ಕ್ರಮ ಸಂ. (11) ರ ಪತ್ರದ ಪ್ರಕಾರ ನೀಡುತ್ತಾ, ಸದರಿ ಆಪಾದಿತ ಅಧಿಕಾರಿ ವಿರುದ್ಧ ಸಾಬೀತಾದ ಆರೋಪಗಳ ತೀವ್ರತೆಯನ್ನು ಪರಿಗಣಿಸಿ ಅವರ ನಿವೃತ್ತಿ ವೇತನದ ಶೇಕಡಾ 5 ರಷ್ಟನ್ನು ಪ್ರತಿ ತಿಂಗಳೂ ಹತ್ತು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತಿಳಿಸಿದೆ. ಆದ್ದರಿಂದ, ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ: 4 ಇಎನ್‌ಕ್ಯೂ 01, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎನ್.ಎಸ್.ಹೊಳೀಮಠ, ಅಂದಿನ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಜಿಲ್ಲಾ ಯೋಜನಾ ಮೇಲ್ವಿಚಾರಣಾ ಘಟಕ, ಶಿವಮೊಗ್ಗ ಇವರ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 214 ರನ್ವಯ ಇವರ ವಿರುದ್ಧ ಇಲಾಖಾ ವಿಚಾರಣೆಯಿಂದ ಸಾಬೀತಾದ ಆಪಾದನೆಗಳ ತೀವ್ರತೆಯನ್ನು ಪರಿಗಣಿಸಿ , ಇವರ ನಿವೃತ್ತಿ ವೇತನದ ಶೇಕಡಾ 5 ರಷ್ಟನ್ನು ಪ್ರತಿ ತಿಂಗಳೂ ಹತ್ತು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್.884

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಧಾರವಾಡ ಜಿಲ್ಲೆ, ಕಲಘಟಗಿ ತಾಲ್ಲೂಕಿನ ಸಂಗಮೇಶ್ವರ ಕೆರೆಗಾಗಿ ಭೂಸ್ವಾಧೀನತೆ ಎಲ್.ಎ.ಸಿ. ನಂ.430 ಮತ್ತು 431/84 (ಇ.ಪಿ.ನಂ.301/02) ರಲ್ಲಿ ಕೋರ್ಟ್ ಡಿಕ್ರಿ ಹಣ ಠೇವಣಿ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 19/03/2005ರ ಪತ್ರದ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ/04-05.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 19/03/2005ರ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್, ಬಿಜಾಪುರ ಇವರು ಕಲಘಟಗಿ ತಾಲ್ಲೂಕಿನ ಸಂಗಮೇಶ್ವರ ಕೆರೆಗಾಗಿ ಭೂಸ್ವಾಧೀನತೆ ಮಾಡಿಕೊಳ್ಳಲಾಗಿರುವ ಜಮೀನಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ರೂ.1,77,174-00ಗಳನ್ನು ಠೇವಣಿ ಧನ ಪಾವತಿಸಲು ಹಣ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಕಲಘಟಗಿ ತಾಲ್ಲೂಕಿನ ಸಂಗಮೇಶ್ವರ ಕೆರೆಗಾಗಿ ಅಗತ್ಯವಿದ್ದ ಜಮೀನಿನ ಭೂಸ್ವಾಧೀನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ 27/12/1979ರಂದು ಹೊರಡಿಸಲಾಗಿದೆ. ಭೂಸ್ವಾಧೀನಾಧಿಕಾರಿಗಳು, ಧಾರವಾಡ ಇವರು ದಿನಾಂಕ 25/03/1983ರಂದು ಪರಿಹಾರ ಧನದ ಐತೀರ್ಪನ್ನು ಹೊರಡಿಸಿರುತ್ತಾರೆ. ಅದರಂತೆ ಪರಿಹಾರ ಧನ ಪಾವತಿಸಲಾಗಿದೆ. ಆದರೆ, ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರ ಪ್ರಕಾರ 2ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಧಾರವಾಡ ರವರ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮಾನ್ಯ ಸದರಿ ನ್ಯಾಯಾಲಯವು ಈ ಬಗ್ಗೆ ಎಲ್.ಎ.ಸಿ. 430 ಮತ್ತು 431/84 ಪ್ರಕರಣಗಳಲ್ಲಿ ವಿಚಾರಣೆ ನಡೆಸಿ ಹೆಚ್ಚಿನ ಪರಿಹಾರ ನೀಡುವಂತೆ ಆದೇಶ ನೀಡಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಸರ್ಕಾರವು ನಿರ್ಧರಿಸಿದೆ. ಈ ಭೂಸ್ವಾಧೀನ ಪ್ರಕರಣಗಳಲ್ಲಿ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 73 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 8ನೇ ಜೂನ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಲಘಟಗಿ ತಾಲ್ಲೂಕಿನ ಸಂಗಮೇಶ್ವರ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳ ಪರಿಹಾರ ಧನದ ವಿಷಯದಲ್ಲಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣ ಸಂಖ್ಯೆ:430/84 ಮತ್ತು 431/84ರಲ್ಲಿ ನೀಡಿರುವ ತೀರ್ಪಿನ ಅನುಸಾರ ಕ್ರಮವಾಗಿ ರೂ.76,427-00ಗಳು ಮತ್ತು ರೂ.1,00,747-00ಗಳು ಒಟ್ಟು ರೂ.1,77,174-00ಗಳ (ಒಂದು ಲಕ್ಷದ ಎಪ್ಪತ್ತೇಳು ಸಾವಿರದ ಒಂದು ನೂರ ಎಪತ್ನಾಲ್ಕು ರೂ.ಗಳು ಮಾತ್ರ) ಹೆಚ್ಚಿನ ಪರಿಹಾರ ಧನವನ್ನು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಗೆ ಮುನ್ನ ಲೆಕ್ಕಾಚಾರದ ತ:ಖ್ತೆಯನ್ನು ಪುನ: ದೃಢೀಕರಿಸಿ ಕೊಂಡು ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆಯಾಗದಂತೆ ಪಾವತಿಸತಕ್ಕದ್ದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವಯ್ಯದಲ್ಲಿ ಲೆಕ್ಕ ಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮಗಳ ಇತ್ಯರ್ಥ-132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ 12/06/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಮಂಜುನಾಥ**

ಪಿ.ಆರ್. 889

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕಿನ ಹಾಗರಗುಂಡಗಿ ಕೆರೆ ನಿರ್ಮಾಣದಲ್ಲಿ ಭೂಸ್ವಾಧೀನಪಡಿಸಿಕೊಳ್ಳಲಾದ ಹಾಗರಗುಂಡಗಿ ಗ್ರಾಮದ ಸ.ನಂ.129/1ಎ2ರ 5–18 ಎಕರೆ ಜಮೀನಿಗೆ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ರವರ ದಿನಾಂಕ: 28/02/2005ರ ಪತ್ರದ ಸಂಖ್ಯೆ:ಸನೀವಿಗು/ಭೂಸ್ವಾ/2005–06.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 28/02/2005ರ ಪತ್ರದಲ್ಲಿ ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದ ಕಾರ್ಯಪಾಲಕ ಇಂಜಿನಿಯರ್ ರವರು ಗುಲ್ಬರ್ಗಾ ತಾಲ್ಲೂಕಿನ ಹಾಗರಗುಂಡಗಿ ಸಣ್ಣ ನೀರಾವರಿ ಕೆರೆ ನಿರ್ಮಾಣದಲ್ಲಿ ಸ್ವಾಧೀನಪಡಿಸಿಕೊಳ್ಳಲಾದ ಹಾಗರಗುಂಡಗಿ ಗ್ರಾಮದ ರಿ.ಸ.ನಂ.129/1ಎ2ರ 5–18 ಎಕರೆ ಜಮೀನಿಗೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಎಂಎಫ್.ಎ. 3720/96ರಲ್ಲಿ ನೀಡಿರುವ ಐತೀರ್ಪಿನಂತೆ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಹಣ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಗುಲ್ಬರ್ಗಾ ತಾಲ್ಲೂಕಿನ ಹಾಗರಗುಂಡಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿದ್ದ ಹಾಗರಗುಂಡಗಿ, ಗ್ರಾಮದ ಸ.ನಂ.129/1ಎ2 ಗೆ ಸೇರಿದ 5–18 ಎಕರೆ ಜಮೀನಿನ ಭೂಸ್ವಾಧೀನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ 12/11/1992ರಲ್ಲಿ ಮತ್ತು 6(1)ರಡಿ ದಿನಾಂಕ 24/06/1993ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಭೂಸ್ವಾಧೀನದ ಐತೀರ್ಪನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರು ದಿನಾಂಕ 30/07/1993ರಂದು ಹೊರಡಿಸಿರುತ್ತಾರೆ. ಈ ಐತೀರ್ಪಿನಂತೆ ಪರಿಹಾರ ಧನ ಪಡೆದುಕೊಂಡ ಭೂಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಂತೆ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ರವರ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ಈ ಬಗ್ಗೆ ಎಲ್.ಎ.ಸಿ. ಸಂಖ್ಯೆ:132/1994ರಲ್ಲಿ ವಿಚಾರಣೆಗೊಂಡು ಮಾನ್ಯ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಮಾಲೀಕರು ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿ, ಮಾನ್ಯ ನ್ಯಾಯಾಲಯವು ಎಂ.ಎಫ್.ಎ. ಸಂಖ್ಯೆ: 3720/1996ರಲ್ಲಿ ಪ್ರತಿ ಎಕರೆಗೆ 30,000 ರೂ.ಗಳಂತೆ ಇತರ ಸವಲತ್ತುಗಳೊಂದಿಗೆ ಪರಿಹಾರ ಧನ ನೀಡಲು ಆದೇಶಿಸಿದೆ. ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಸರ್ಕಾರ ನಿರ್ಧರಿಸಿದ್ದು, ನ್ಯಾಯಾಲಯದ ಆದೇಶದಲ್ಲಿ ಹೆಚ್ಚಿನ ಪರಿಹಾರ ಧನ ಪಾವತಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 85 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕಿನ ಹಾಗರಗುಂಡಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹಾಗರಗುಂಡಗಿ ಗ್ರಾಮದ ಸ.ನಂ.129/1ಎ2ರ 5–18 ಎಕರೆ ಜಮೀನಿಗೆ ಕರ್ನಾಟಕ ಉಚ್ಚ ನ್ಯಾಯಾಲಯವು ಎಂಎಫ್ಎ ಸಂಖ್ಯೆ: 3720/96ರಲ್ಲಿ ನೀಡಿರುವ ತೀರ್ಪಿನಂತೆ 2,24,425–00 ರೂ.ಗಳನ್ನು (ಎರಡು ಲಕ್ಷದ ಇಪ್ಪತ್ನಾಲ್ಕು ಸಾವಿರದ ನಾನೂರ ಇಪ್ಪತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2005–06ನೇ ಸಾಲಿನ ಆಯವಯ್ಯದಲ್ಲಿ ಲೆಕ್ಕ ಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ–132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ 12/06/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಮಂಜುನಾಥ**

ಪಿ.ಆರ್. 885

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2004-2005ನೇ ಸಾಲಿನಲ್ಲಿ ಎಸ್‌ಜಿಎಸ್‌ವೈ ಯಡಿ ಚಿಕ್ಕಮಗಳೂರು ಜಿಲ್ಲೆಗೆ ಬಿಡುಗಡೆಯಾಗಿದ್ದ ರಾಜ್ಯದ ಪಾಲಿನ ಹಣದ ನವೀಕರಣದ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 18 ಸ್ವಜಯೋ 2004, ದಿ:31-03-05.
2. ಮುಖ್ಯ ಲೆಕ್ಕಾಧಿಕಾರಿಗಳು, ಜಿ.ಪಂ. ಚಿಕ್ಕಮಗಳೂರು ಇವರ ಅ.ಸ.ಪ. ಸಂಖ್ಯೆ:ಜಿಪಂಚಿ. ಆರ್ಥಿಕ.ಯೋ.2. ಎಸ್‌ಜಿಆರ್‌ವೈ 04-05, ದಿನಾಂಕ: 01-04-2005.
3. ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಚಿಕ್ಕಮಗಳೂರುರವರ ಪತ್ರದ ಸಮಸಂಖ್ಯೆ. ಜಿಪಂಚಿ.ಅ3.ಸ್ವಜಯೋ 01:04-05 ದಿನಾಂಕ:02-04-05.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ದಿನಾಂಕ 02-04-2005ರ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ರೂ.6,91,000/- ಹಾಗೂ ಕೊಡಗು ಜಿಲ್ಲೆಗೆ ರೂ.1,35,000/-ಗಳನ್ನು ಬಿಡುಗಡೆ ಮಾಡಿತ್ತು. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಮೇಲೆ ಓದಲಾದ (1) ರ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ರೂ.2,30,000/- ಹಾಗೂ ಕೊಡಗು ಜಿಲ್ಲೆಗೆ ರೂ.45,000/- ಗಳನ್ನು ಬಿಡುಗಡೆ ಮಾಡಿ ಅದೇ ದಿನ ರಾಜ್ಯ ಖಜಾನಾ ಗಣಕ ಜಾಲದಲ್ಲಿ ಅಳವಡಿಸಿತ್ತು. ಆದರೆ ಚಿಕ್ಕಮಗಳೂರು ಜಿಲ್ಲಾ ಪಂಚಾಯತ್ ಮೇಲೆ ಓದಲಾದ (2) ಮತ್ತು (3)ರ ಪತ್ರಗಳಲ್ಲಿ ಜಿಲ್ಲಾ ಖಜಾನಾ ಗಣಕ ಕೇಂದ್ರದಲ್ಲಿ ಅನುದಾನ ಹೊಂದಾಣಿಕೆಯಾಗದೆ ಅನುದಾನ ಲಭ್ಯವಿಲ್ಲವೆಂದು ಆಕ್ಷೇಪಿಸಿ ಬಿಲ್ಲನ್ನು ಹಿಂದಿರುಗಿಸಿರುವುದಾಗಿ ತಿಳಿಸಿ ಪರಿಷ್ಕೃತ ಆದೇಶ ನೀಡುವಂತೆ ಕೋರಿರುತ್ತಾರೆ. ಆದುದರಿಂದ ರೂ.2,30,000/- ಗಳ ಅನುದಾನವನ್ನು 2005-06ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಭರಿಸಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 18 ಸ್ವಜಯೋ 2004, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ರಾಜ್ಯ ಸರ್ಕಾರವು 2004-2005ನೇ ಸಾಲಿನ 2ನೇ ಕಂತಿನ ಅನುದಾನವನ್ನು ಚಿಕ್ಕಮಗಳೂರು ಜಿಲ್ಲೆಗೆ ರೂ. 2,30,000-00 ಗಳನ್ನು {ರೂ. ಎರಡು ಲಕ್ಷದ ಮೂವತ್ತು ಸಾವಿರ ಮಾತ್ರ} ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು -196- ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್ ಗಳು-07- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ - ಯೋಜನೆ 2004-2005 (2501-01-196-1-07) ರಡಿ ಭರಿಸಲು ಆದೇಶಿಸಿತ್ತು.

ಆದರೆ ಜಿಲ್ಲಾ ಖಜಾನೆಯಲ್ಲಿ ಹೊಂದಾಣಿಕೆಯಾಗಿಲ್ಲದೇ ಇರುವುದರಿಂದ ಈಗ ಬದಲಾಗಿರುವ ಲೆಕ್ಕ ಶೀರ್ಷಿಕೆಯಡಿ ಕೆಳಕಂಡ ಷರತ್ತಿಗೊಳಪಟ್ಟು ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

**ಬದಲಾದ ಲೆಕ್ಕಶೀರ್ಷಿಕೆ ಕೆಳಕಂಡಂತಿದೆ**

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು-01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು -198- ಗ್ರಾಮ ಪಂಚಾಯತ್‌ಗಳಿಗೆ ಸಹಾಯ-1- ಗ್ರಾಮ ಪಂಚಾಯತ್‌ಗಳು-01- ಬ್ಲಾಕ್ ಅನುದಾನದಡಿ (ಯೋಜನೆ) (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2005-2006 (2501-01-198-1-01) ರಲ್ಲಿ ಭರಿಸತಕ್ಕದ್ದು. ಸದರಿ ಅನುದಾನವನ್ನು ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡದೆ ಬಿಳಿ ಬಣ್ಣದ ಸಹಾಯಾನುದಾನದ ಬಿಲ್ ಮೂಲಕ ಚೆಕ್ ಪಡೆದು ಎಸ್‌ಜಿಎಸ್‌ವೈ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಳ್ಳತಕ್ಕದ್ದು. ಅನುದಾನವನ್ನು ಎಸ್‌ಜಿಎಸ್‌ವೈಯಡಿ ತೆರೆದಿರುವ ಗ್ರಾಮ ಪಂಚಾಯತ್‌ಗಳ ಬ್ಯಾಂಕ್ ಖಾತೆಗೆ ಚೆಕ್ ಮೂಲಕ ಬಿಡುಗಡೆ ಮಾಡತಕ್ಕದ್ದು.

| ಕ್ರ. ಸಂ. | ಜಿ.ಪಂ.ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗಿರುವ 2ನೇ ಕಂತು | ರಾಜ್ಯಸರ್ಕಾರ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|
| 1. | ಚಿಕ್ಕಮಗಳೂರು | 408 | 1800ZZ0017 | 6,91,000 | 2,30,000 |

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿ ಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ಇರತಕ್ಕದ್ದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆ ಇವರು ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2005-2006 ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ {ಅಭಿವೃದ್ಧಿ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆ ಇವರು ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 217 ಪಿಬಿಎಸ್ 05 ದಿನಾಂಕ 04-06-2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.70 /05 ದಿನಾಂಕ 16-06-2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.901

## ಸಾರಿಗೆ ಸಚಿವಾಲಯ

**ವಿಷಯ:** ಬೆಂಗಳೂರು ನಗರದಲ್ಲಿ ಐದು ಹೆಚ್ಚುವರಿ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಗಳನ್ನು ತೆರೆಯುವ ಬಗ್ಗೆ.

**ಓದಲಾಗಿದೆ:** 1. ಸಾರಿಗೆ ಆಯುಕ್ತರ ಪತ್ರ ಸಂ:ಸಾಆ/ಸಿಬ್ಬಂದಿ–1/ಪಿಆರ್ 163/04–05, ದಿ: 18–12–2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಾರಿಗೆ ಆಯುಕ್ತರು ಈಗ ಹಾಲಿ ಇರುವ ಐದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಚೇರಿಗಳನ್ನು 1984 ನೇ ಸಾಲಿನಲ್ಲಿ ತೆರೆಯಲಾಗಿದ್ದು 20 ವರ್ಷಗಳ ಅವಧಿಯಲ್ಲಿ ಜನಸಂಖ್ಯೆ ಹಾಗೂ ವಾಹನಗಳ ನೋಂದಣಿ ಶೇಕಡ.87 ರಷ್ಟು ಹೆಚ್ಚಿದ್ದು ಅದಕ್ಕೆ ಅನುಗುಣವಾಗಿ ಹೊಸದಾಗಿ ಕಛೇರಿಗಳು ತೆರೆಯದೇ ಇದ್ದುದ್ದರಿಂದ ಸಾರ್ವಜನಿಕರಿಗೆ ವಾಹನಗಳ ನೊಂದಣಿ, ಚಾಲನಾ ಅನುಜ್ಞಾ ಪತ್ರ, ರಹದಾರಿ ಇತ್ಯಾದಿಗಳನ್ನು ನೀಡಲು ತೊಂದರೆಯಾಗುತ್ತಿರುವುದರಿಂದ, ಸಾರ್ವಜನಿಕರ ಕಾರ್ಯನಿರ್ವಹಣೆಯಲ್ಲಿ ಅಡಚಣೆ ಉಂಟಾಗುತ್ತಿದ್ದು ಇದನ್ನು ಜವಾಬ್ದಾರಿಯಿಂದ ನಿರ್ವಹಿಸಲು ಅಧಿಕಾರ ವಿಕೇಂದ್ರಿಕರಣದ ಹಿನ್ನಲೆಯಲ್ಲಿ ಹೊಸದಾಗಿ ಐದು ಪ್ರಾದೇಶಿಕ ಸಾರಿಗೆ ಕಚೇರಿಗಳನ್ನು ತೆರೆಯಬೇಕೆಂದು ಅದರಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ರಾಜರಾಜೇಶ್ವರಿ ನಗರದ ಸಹಾಯಕ ಪ್ರಾದೇಶಿಕ ಸಾರಿಗೆ

ಕಚೇರಿಯನ್ನು ಪ್ರಾದೇಶಿಕ ಸಾರಿಗೆ ಕಛೇರಿಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಹಾಗೂ ಯಲಹಂಕ, ಕೃಷ್ಣರಾಜಪುರಂ, ಬನ್ನೇರುಘಟ್ಟ, ಮತ್ತು ನೆಲಮಂಗಲದಲ್ಲಿ ನಾಲ್ಕು ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಚೇರಿಗಳನ್ನು ತೆರೆಯುವಂತೆ ಕೋರಿರುತ್ತಾರೆ. ಅಲ್ಲದೇ, ಉನ್ನತೀಕರಣ ಹೊಂದಲಿರುವ ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿ ಮತ್ತು ಪ್ರಸ್ತಾಪಿತ ಹೆಚ್ಚುವರಿ ನಾಲ್ಕು ಪ್ರಾದೇಶಿಕ ಸಾರಿಗೆ ಕಚೇರಿಗಳಿಗೆ ಸಿಬ್ಬಂದಿ, ಪೀಠೋಪಕರಣ ಮತ್ತು ವಾಹನಗಳನ್ನು ಹಾಲಿ ಇರುವ ಕಚೇರಿಯಿಂದಲೇ ಸರಿದೂಗಿಸಿಕೊಳ್ಳುವಂತೆಯೂ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ವೃಂದದಿಂದ ಬಡ್ತಿ ನೀಡಿ ಭರ್ತಿ ಮಾಡಿಕೊಳ್ಳುವಂತೆ ಸೂಚಿಸಿರುತ್ತಾರೆ. ಸದರಿ ಕಛೇರಿ ವ್ಯಾಪ್ತಿಗೆ ಬರುವ ಸ್ಥಳಗಳನ್ನು ಅನುಬಂಧದಲ್ಲಿ ನೀಡಿರುತ್ತಾರೆ.

ಸಾರಿಗೆ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಾರಿಇ 39 ಸಾಇಪ 2005, ಬೆಂಗಳೂರು ದಿನಾಂಕ:6ನೇ ಜೂನ್, 2005,**
**ಯೂನಿಕ್ ಸಂಖ್ಯೆ: 183:2005, ದಿನಾಂಕ: 6ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನೊಳಗೊಂಡಂತೆ ರಾಜರಾಜೇಶ್ವರಿ ನಗರದಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾದೇಶಿಕ ಸಾರಿಗೆ ಕಚೇರಿಯನ್ನಾಗಿ ಉನ್ನತೀಕರಿಸಲಾಗಿದೆ ಹಾಗೂ ಯಲಹಂಕ, ಕೃಷ್ಣರಾಜಪುರಂ, ಬನ್ನೇರುಘಟ್ಟ, ಮತ್ತು ನೆಲಮಂಗಲದಲ್ಲಿ (ಅನುಬಂಧದಲ್ಲಿ ಸೂಚಿಸಿರುವ ಸ್ಥಳಗಳನ್ನೊಳಗೊಂಡಂತೆ) ಹೊಸದಾಗಿ

ಪ್ರಾದೇಶಿಕ ಸಾರಿಗೆ ಕಚೇರಿಗಳನ್ನು ತೆರೆಯಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮತಿ ನೀಡಿದೆ.

1. ರಾಜರಾಜೇಶ್ವರಿನಗರ, ರಾಯಚೂರು, ಚಿಕ್ಕಮಗಳೂರು, ಹಾವೇರಿ ಮತ್ತು ಕಾರವಾರ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಯಲ್ಲಿ ಅಸ್ತಿತ್ವದಲ್ಲಿರುವ ಒಂದೊಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಹುದ್ದೆಗಳನ್ನಾಗಿ ಉನ್ನತೀಕರಿಸಿ ರಾಜರಾಜೇಶ್ವರಿ ನಗರ, ಯಲಹಂಕ, ಕೃಷ್ಣರಾಜಪುರಂ, ಬನ್ನೇರುಘಟ್ಟ, ಮತ್ತು ನೆಲಮಂಗಲದಲ್ಲಿ ಹೊಸದಾಗಿ ಸೃಜಿಸಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಗಳಿಗೆ ಸ್ಥಳಾಂತರಿಸಲಾಗಿದೆ. ಸದರಿ ಉನ್ನತೀಕರಣದಿಂದ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ವೃಂದದಲ್ಲಿನ ಐದು ಹುದ್ದೆಗಳನ್ನು ಕಡಿತಗೊಳಿಸಲಾಗಿದ್ದು ಹೊಸ ಹುದ್ದೆಗಳನ್ನು ಸೃಜಿಸಲಾಗುವುದಿಲ್ಲ.
2. ಸದರಿ ಪ್ರಾದೇಶಿಕ ಸಾರಿಗೆ ಕಛೇರಿಗಳಿಗೆ ಸಿಬ್ಬಂದಿ ಮತ್ತು ವಾಹನವನ್ನು ಈಗಾಗಲೇ ಅಸ್ತಿತ್ವದಲ್ಲಿರುವ ಕಛೇರಿಗಳಿಂದ ಪಡೆಯತಕ್ಕದ್ದು.
3. ಪೀಠೋಪಕರಣಗಳನ್ನು ಸಹ ಹಾಲಿ ಅಸ್ತಿತ್ವದಲ್ಲಿರುವ ಪ್ರಾದೇಶಿಕ ಸಾರಿಗೆ ಕಛೇರಿ/ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿಗಳಿಂದಲೇ ಸರಿದೂಗಿಸಿಕೊಳ್ಳತಕ್ಕದ್ದು.
4. ಸದರಿ ಉನ್ನತೀಕರಣ ಮೊದಲ ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಾರ್ಯಭಾರವಹಿಸಿಕೊಂಡ ತಕ್ಷಣದಿಂದ ಕಾರ್ಯರೂಪಕ್ಕೆ ಬರುತ್ತದೆ,

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 496 ವೆಚ್ಚ 6/2005, ದಿ:04-05-2005 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ವಾಸುದೇವ**
ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಾರಿಗೆ ಇಲಾಖೆ.

**ಸರ್ಕಾರದ ಆದೇಶ ಸಂ:ಸಾರಿಇ 39 ಸಾಇಪ 2005, ದಿನಾಂಕ:06-06-2005, ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಪ್ರಾದೇಶಿಕ ಸಾರಿಗೆ ಕಚೇರಿ, ಹೊಸದಾಗಿ ತೆರೆಯಲು ಪ್ರಸ್ತಾಪಿಸಿರುವ ಸ್ಥಳ | ಪ್ರಾದೇಶಿಕ ಸಾರಿಗೆ ಕಛೇರಿ ವ್ಯಾಪ್ತಿಯಲ್ಲಿ ಬರುವ ಸ್ಥಳಗಳು |
|---|---|---|
| 1. | ಯಲಹಂಕ | ಯಲಹಂಕ, ಯಲಹಂಕ ಸೆಟಲೈಟ್ ಟೌನ್, ಯಲಹಂಕ ನ್ಯೂ ಟೌನ್, ಕೆ.ಹೆಚ್.ಬಿ. ಕಾಲೋನಿ,ಕಾಟೀಗೆನಹಳ್ಳಿ, ಶ್ರೀನಿವಾಸಪುರ, ಕೋಗ್ಲಿ, ಅಗ್ರಹಾರ, ಸಿಆರ್‌ಪಿಎಫ್, ಅನಂತಪುರ, ಅಟ್ಟೂರು, ನೆಹರೂ ನಗರ, ಪುಟ್ಟೇನಹಳ್ಳಿ, ಅಳ್ಳಾಳಸಂದ್ರ, ಚಿಕ್ಕಬೊಮ್ಮಸಂದ್ರ, ಜುಡಿಷಿಯಲ್ ಲೇ ಔಟ್, ಜಿ.ಕೆ.ವಿ.ಕೆ. ರಾಜೀವ ಗಾಂಧಿನಗರ, ಜಕ್ಕೂರು, ಬ್ಯಾಟರಾಯನಪುರ, ಕಾಫೀ ಬೋರ್ಡ ಲೇ ಔಟ್, ಹೆಬ್ಬಾಳ, ಕೆಂಪಾಪುರ, ಸಹಕಾರನಗರ, ಕೋಡಿಗೇನಹಳ್ಳಿ, ಕೋಡಿಹೊಸಹಳ್ಳಿ, ಟಾಟಾನಗರ, ತಿಂಡ್ಲು, ವಿದ್ಯಾರಣ್ಯಪುರ, ದೊಡ್ಡಬೊಮ್ಮಸಂದ್ರ, ಸಿಂಗಾಪೂರ್, ರಾಮಚಂದ್ರಪುರ, ಗಂಗಮ್ಮ ಸರ್ಕಲ್, ಎಂ.ಎಸ್.ಪಾಳ್ಯ, ಮದರ್ ಡೈರಿ, ಉಳಾಹಳ್ಳಿ ಪೂರ್ವ, ಚಿಕ್ಕಸಂದ್ರ, ಗುಡ್ಡಹಳ್ಳಿ, ಅಬ್ಬಿಗೆರೆ, ಚಿಕ್ಕಬಾಣಾವರ, ಅರ್ಕಾವತಿ ಲೇಔಟ್. ಹೊರವರ್ತುಲ ರಸ್ತೆಯ ನಂತರದ ಕಾಲೋನಿಗಳು. |
| 2. | ಕೃಷ್ಣರಾಜಪುರಂ | ಕೆ.ಆರ್.ಪುರಂ, ಹೊಸಕೋಟೆ ತಾಲ್ಲೂಕು, ವಿಗ್ರೋನಗರ, ಅವಲಹಳ್ಳಿ,ಹೇರಂಡಹಳ್ಳಿ, ಬಿದರ ಹಳ್ಳಿ, ಕಟ್ಟಿಗೆ ಹಳ್ಳಿ, ದೇವಸಂದ್ರ, ಜಂಬೂಚೆಟ್ಟಿ ಪಾಳ್ಯ, ರಾಮಮೂರ್ತಿನಗರ, ಕಲ್ಕೆರೆ, ಚನ್ನಸಂದ್ರ, ಕಸ್ತೂರಿನಗರ, ಬಾಣಸವಾಡಿ, ಮಾರುತಿ ಸೇವಾನಗರ, ಡಿಫೆನ್ಸ ಕಾಲೋನಿ ಲೇ ಔಟ್, ಹೆಚ್.ಬಿ.ಆರ್. ಲೇ ಔಟ್, ಹೆಣ್ಣೂರು, ಕಲ್ಯಾಣನಗರ, ಜೀವನಹಳ್ಳಿ, ಕಮ್ಮನಹಳ್ಳಿ, ಎ ನಾರಾಯಣಪುರ, ಬಿ ನಾರಾಯಣಪುರ, ಐ.ಟಿ.ಐ. ಲೇ ಔಟ್, ಮಹದೇವಪುರ, ಗರುಡಾಚಾರ ಪಾಳ್ಯ, ಹುಡಿ ಮತ್ತು ಹುಡಿ ಕೈಗಾರಿಕಾ ಪ್ರದೇಶ, ಐ.ಟಿ.ಪಿ.ಎಲ್. ಕಗ್ಗದಾಸಪುರ, ವರ್ತೂರು, ವೈಟ್ ಫೀಲ್ಡ್, ವಗತ, ದೇವನಗುಡಿ, ಸೊರಹುಣಸೆ, ಕೊಡಿ. |

| ಕ್ರಮ ಸಂಖ್ಯೆ | ಪ್ರಾದೇಶಿಕ ಸಾರಿಗೆ ಕಚೇರಿ, ಹೊಸದಾಗಿ ತೆರೆಯಲು ಪ್ರಸ್ತಾಪಿಸಿರುವ ಸ್ಥಳ | ಪ್ರಾದೇಶಿಕ ಸಾರಿಗೆ ಕಛೇರಿ ವ್ಯಾಪ್ತಿಯಲ್ಲಿ ಬರುವ ಸ್ಥಳಗಳು |
|---|---|---|
| 3. | ರಾಜರಾಜೇಶ್ವರಿ ನಗರ | ರಾಜರಾಜೇಶ್ವರಿ ನಗರ, ಪಟ್ಟಣಗೆರೆ, ಮೈಲಸಂದ್ರ, ಆರ್.ವಿ. ಕಾಲೇಜ್, ರೆಮ್ಕೊ ಲೇಔಟ್, ಬೆಮೆಲ್ ಲೇ ಔಟ್ ಸ್ಟೇಜ್ 1 ರಿಂದ IV , ಶ್ರೀನಿವಾಸಪುರ, ಚನ್ನಾಸಂದ್ರ ಲೇಔಟ್, ಪೂರ್ಣಪ್ರಜ್ಞಾ ಹೌಸಿಂಗ್ ಸೊಸೈಟಿ ಲೇ ಔಟ್, ಕೊಡಿಪುರ, ಅರೇಹಳ್ಳಿ, ಆಂಜನೇಯ ಸ್ವಾಮಿ ಲೇ ಔಟ್, ಹೊಸಕೆರೆ ಹಳ್ಳಿ, ಪಿ.ಇ.ಎಸ್. ಕಾಲೇಜ್, ನಾಗರಭಾವಿ I to IV ಸ್ಟೇಜ್, ಬಿ.ಡಿ.ಎ. ಕಾಂಪ್ಲೆಕ್ಸ್, ಎನ್.ಜಿ.ಇ.ಎಫ್. ಲೇಔಟ್, ಮೂಡಲ ಪಾಳ್ಯ, ಚಂದ್ರಾ ಲೇಔಟ್, Income tax layout, ಜ್ಞಾನಭಾರತಿ, ಉಲ್ಲಾಳ, ಮಲ್ಲತಹಳ್ಳಿ, ಪಾಪರೆಡ್ಡಿ ಪಾಳ್ಯ, ಅನ್ನಪೂರ್ಣೇಶ್ವರಿ ನಗರ, ಶ್ರೀಗಂಧಕಾವಲ್, ಸುಂಕದಕಟ್ಟೆ, ಕಾಮಾಕ್ಷಿಪಾಳ್ಯ,ವಿಶ್ವನೀದಮ್, ಮಾಚೋ ಹಳ್ಳಿ, ಆಂದ್ರಹಳ್ಳಿ, ಪೂರ್ಣಪ್ರಜ್ಞನಗರ, ಎನ್.ಜಿ.ಒ ಲೇಔಟ್,ಸಿಂಡಿಕೇಟ್ ಬ್ಯಾಂಕ್ ಲೇ ಔಟ್, ಬಿ.ಇ.ಎಲ್. ಲೇಔಟ್, ಮಾಗಡಿ, ಮಾಗಡಿ ತಾಲ್ಲೂಕು, ತಾವರೆ ಕೆರೆ, ತಿಪ್ಪಗೊಂಡನಹಳ್ಳಿ, ಜ್ಞಾನಪ್ರಿಯನಗರ, ಕೆಂಗೇರಿ, ಕೆಂಗೇರಿ ಉಪನಗರ, ನಾಯಂಡನಹಳ್ಳಿ, ಬಿದರಿ, ದೊಡ್ಡ ಆಲದಮರ, ರೋಮೋಹಳ್ಳಿ, ಕುಂಬಳಗೊಡು, ಟಿಂಬರ್ ಯಾರ್ಡ್ ಲೇಔಟ್, ಬ್ಯಾಟರಾಯನಪುರ, ಗಿರಿನಗರ, ಶ್ರೀನಗರ, ಅವಲಹಳ್ಳಿ, ನಾಗೇಂದ್ರ ಬ್ಲಾಕ್, ಹಳೇ ಗುಡ್ಡದಹಳ್ಳಿ |
| 4. | ಬನ್ನೇರು ಘಟ್ಟ | ಕನಕಪುರ ರಸ್ತೆ, ಯಲೇಚನಹಳ್ಳಿ, ಕುಮಾರ್ ಸ್ವಾಮಿ ಲೇ ಔಟ್, ಪದ್ಮನಾಭನಗರ, ಚಿಕ್ಕಲ್ಲಸಂದ್ರ, ಕೋಣನಕುಂಟೆ, ಹಾರೋಹಳ್ಳಿ, ಸೋಮನಹಳ್ಳಿ, ಬನ್ನೇರುಘಟ್ಟ ರಸ್ತೆ, ಹೊಸೂರು ಸರ್ಜಾಪುರ ರಸ್ತೆ, ಬಿ.ಟಿ.ಎಮ್. ಲೇಔಟ್, ಜೆ.ಪಿ.ನಗರ 6ನೇ ಹಂತ,7ನೇ ಹಂತ, ಅಂಜನಾಪೂರ ಲೇ ಔಟ್, ತಳಘಟ್ಟಪುರ, ಪುಟ್ಟೇನಹಳ್ಳಿ, ಆರ್.ಬಿ.ಐ.ಕಾಲೋನಿ, ಕೊಟ್ಟಿಮ ದಿನ್ನೆ, ಮೈಕೋ ಲೇ ಔಟ್, ಅರೆಕೆರೆ, ಮೀನಾಕ್ಷಿ ದೇವಸ್ಥಾನ ರಸ್ತೆ ಲೇ ಔಟ್, ಹೊರ ವರ್ತುಲ ರಸ್ತೆ, ಅಗರ, ಸರ್ಜಾಪುರ, ಹೆಚ್.ಎಸ್.ಆರ್. ಲೇ ಔಟ್, ಬೆಳಂದೂರು, ಬೊಮ್ಮನಹಳ್ಳಿ, ಮಂಗಮ್ಮನಪಾಳ್ಯ, ಬೇಗೂರು ರೂಪೇನ ಅಗ್ರಹಾರ, ಎಲೆಕ್ಟ್ರಾನಿಕ್ ಸಿಟಿ, ಹುಸ್ಕೂರು, ಚಂದಾಪೂರ್, ಅತ್ತಿಬೆಲೆ, ಜಿಗಣಿ, ಅನೇಕಲ್ ತಾಲ್ಲೂಕು. |
| 5. | ನೆಲಮಂಗಲ | ನೆಲಮಂಗಲ ತಾಲ್ಲೂಕು, ದಾಸನಪುರ ನಗರ ಸಭೆ ಪ್ರದೇಶ, ಅರಶಿಣಕುಂಟೆ, 12ನೇ ಮೈಲಿಯಿಂದ ಅಂದರೆ ಹಿಮಾಲಯ ಡ್ರಗ್ ಕಂಪೆನಿ, ಡಾಬಸ್ ಪೇಟೆ, ತ್ಯಾಮಗೊಂಡ್ಲು. |

**ಬಿ. ವಾಸುದೇವ**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಾರಿಗೆ ಇಲಾಖೆ.

ಪಿ.ಆರ್. 899

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಆಡಳಿತ ಸೇವಾ ಸಮೂಹ 'ಎ' (ಸೂಪರ್ ಟೈಂ ಶ್ರೇಣಿ) ಅಧಿಕಾರಿ ಹಾಗೂ ನಿಯೋಜನೆ ಮೇಲೆ ರಿಜಿಸ್ಟ್ರಾರ್, ನಿಮ್ಹಾನ್ಸ್, ಬೆಂಗಳೂರು ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀಮತಿ ಎಂ.ವಿ.ಸಾವಿತ್ರಿ, ಇವರ ನಿಯೋಜನಾ ಷರತ್ತು ಮತ್ತು ನಿಬಂಧನೆಗಳು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 82 ಅಸೇವ 2004 ದಿನಾಂಕ 06-11-2004.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 195:ಅಸೇಇ: 2005, ಬೆಂಗಳೂರು, ದಿನಾಂಕ: 16ನೇ ಜೂನ್, 2005**

01) ಕರ್ನಾಟಕ ಆಡಳಿತ ಸೇವಾ ಸಮೂಹ ಎ (ಸೂ.ಟೈಂ.ಶ್ರೇಣಿ) ಅಧಿಕಾರಿ, ಹಾಗೂ ನಿಯೋಜನೆ ಮೇಲೆ ರಿಜಿಸ್ಟ್ರಾರ್, ನಿಮ್ಹಾನ್ಸ್, ಬೆಂಗಳೂರು, ಹುದ್ದೆಯಲ್ಲಿ (ಇಲ್ಲಿ ಇನ್ನು ಮುಂದೆ ನಿಯೋಜಕ ಎಂದು ಉಲ್ಲೇಖಿಸಲಾಗಿದೆ) ಸೇವೆ ಸಲ್ಲಿಸುತ್ತಿರುವ ಶ್ರೀಮತಿ ಎಂ.ವಿ.ಸಾವಿತ್ರಿ ರವರ (ಇಲ್ಲಿ ಇನ್ನು ಮುಂದೆ ಅಧಿಕಾರಿ ಎಂದು ಉಲ್ಲೇಖಿಸಲಾಗುವುದು) ನಿಯೋಜನೆ ಷರತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

1) **ನಿಯೋಜನೆ ಅವಧಿ:-** ಅನ್ಯ ಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ: 28-01-2005 ರಿಂದ ಮೂರು ವರ್ಷ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

2) **ಅನ್ಯ ಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:-** ಅನ್ಯ ಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರು ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು; ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

3) **ವೇತನ:-** ಅನ್ಯ ಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಅವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200 ರೂ.ಗಳ ಗರಿಷ್ಠ ಮಿತಿಗೊಳಪಟ್ಟು ಆ ವೇತನ ಶ್ರೇಣಿಯ ಸರಾಸರಿಯ ಶೇಕಡ 5ರ ದರದಲ್ಲಿ ಅನ್ಯ ಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

4) **ತುಟ್ಟಿಭತ್ಯೆ/ಮನೆಬಾಡಿಗೆ ಭತ್ಯೆ/ನಗರ ಪರಿಹಾರ ಭತ್ಯೆ:**-ತುಟ್ಟಿಭತ್ಯೆ, ಮನೆಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

5) **ಸೇರುವ ಕಾಲ, ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ:-** ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ/ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

6) **ಪ್ರಯಾಣ ಭತ್ಯೆ:-** ನಿಯೋಜನೆ ಮೇಲೆ ಅನ್ಯ ಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

7) **ರಜೆ ನಿಯಮಗಳು**:- ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜೆ ನಿಯಮಗಳಿಗೆ ಒಳಪಟ್ಟಿರುತ್ತಾರೆ.

8) **ರಜೆ ಪ್ರಯಾಣ ರಿಯಾಯಿತಿ:-** ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

9) **ಗಳಿಕೆ ರಜೆ ನಗದೀಕರಣ:-** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಸಿ ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

10) **ವೈದ್ಯಕೀಯ ರಿಯಾಯಿತಿಗಳು**:-1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ) ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ಅನ್ಯ ನಿಯೋಜಕರೇ ಭರಿಸತಕ್ಕದ್ದು.

11) **ದುರ್ಬಲತೆ ರಜೆ**:- ನಿಯೋಜಕರ ಬಳಿ ಸೇವೆಯಲ್ಲಿರುವಾಗ ಮತ್ತು/ಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡುಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯ ನಿಯೋಜಕರು ಬದ್ಧರಾಗಿರುತ್ತಾರೆ.

12) **ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:-** (ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿಮಾಡತಕ್ಕದ್ದು.

| | |
|---|---|
| ರಜೆ ವೇತನ ಅಂಶದಾನ : | ಅನ್ಯ ಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ ಪಡೆಯುವ ಸಂಬಳದ ಶೇಕಡ 11ರಷ್ಟು. |
| ನಿವೃತ್ತಿ ವೇತನ ಅಂಶದಾನ: | ಕಾಲಕಾಲಕ್ಕೆ ಪಡೆಯುವ ವೇತನದ ಮಟನೇ ಒಂದು ಭಾಗ ಈ ಉದ್ದೇಶಕ್ಕೆ "ವೇತನ" ಎಂದರೆ ಸರ್ಕಾರಿ ಆದೇಶ ಸಂಖ್ಯೆ,ಎಫ್.ಡಿ 37 ಎಸ್ಆರ್ಎಸ್ 87 ದಿನಾಂಕ:11-2-1988ರಲ್ಲಿ ವಿವರಿಸಲಾದ ವೇತನ ಎಂದು ಅರ್ಥ. |

(ಆ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯ ಸೇವೆಯು ಮುಗಿದು ಹೊಂದಂದಿನಿಂದ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ಪಾವತಿ ಮಾಡತಕ್ಕದ್ದು. ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | | |
|---|---|---|
| (ಅ) ರಜೆವೇತನ ಅಂಶದಾನ | (1) ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ<br>(2) ಇತರರ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು-60. ಇತರೆ ಸೇವೆಗಳು-800 ಇತರೆ ಜಮೆಗಳು.13 ಅಖಿಲಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ. |
| | (ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ<br>(ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೆ ಹೋದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ ಸಂಬಂಧದ ಜಮೆ ಶೀರ್ಷಿಕೆ.800- ಇತರೆ ಜಮೆಗಳು-ರಜೆ ವೇತನದ ಅಂಶದಾನ. |
| | ಸಾಮಾನ್ಯ ಸೇವೆಗಳು . | 0075. ಇತರೆ ಸಾಮಾನ್ಯ ಸೇವೆಗಳು-800 |
| | ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ. | ಇತರೆ ಜಮೆಗಳು-ರಜೆ ವೇತನ ಅಂಶದಾನ. |
| | ಸಾಮಾಜಿಕ ಮತ್ತು ಸಾಮೂದಾಯಕ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ. | 0250.ಇತರೆ ಸಾಮಾಜಿಕ ಸೇವೆಗಳು-800.<br>ಇತರೆ ಜಮೆಗಳು -ರಜೆ ವೇತನ ಅಂಶದಾನ. |
| | ಆರ್ಥಿಕ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ. | 1475.ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-800.ಇತರೆ ಜಮೆಗಳು-ರಜೆ ವೇತನ ಅಂಶದಾನ |

| | |
|---|---|
| (ಆ)ನಿವೃತ್ತಿ ವೇತನ ಅಂಶದಾನ. | 0071 ನಿವೃತ್ತಿ ವೇತನ ಮತ್ತು ಇತರೆ ನಿವೃತ್ತಿ ಸೌಲಭ್ಯಗಳ ಬಗ್ಗೆ ಅಂಶದಾನ ಮತ್ತು ವಸೂಲಿಗಳು -101 .ಚಂದಾಗಳು ಮತ್ತು ಅಂಶ ದಾನಗಳು-03. ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06. ನಿವೃತ್ತಿ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ. |

(ಇ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿಮಾಡುವ ದಿನಾಂಕದವರೆಗೆ ಪ್ರತಿ 100 ರೂ.ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

13) **ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:**-ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಗೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ-ಎ ದಲ್ಲಿನ ಅನುಸೂಚಿಯೊಂದಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-2) ಇವರ ಹೆಸರಿಗೆ ಕ್ರಾಸ್ ಮಾಡಿದ ಚೆಕ್/ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕಶೀರ್ಷಿಕೆಗೆ ಜಮೆ ಮಾಡಲು ಕಳುಹಿಸಿ ಕೊಡತಕ್ಕದ್ದು.

14) **ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ/ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ:**-ಅನ್ಯ ಸೇವೆಯ ಮೇಲೆ ಪ್ರತಿನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ. ನಿಯಮಾವಳಿ/ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ/ ಜಿ.ಪಿ.ಎಫ್.ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡ ತಕ್ಕದ್ದು. ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

| | |
|---|---|
| ಸಾಮಾನ್ಯ ಭವಿಷ್ಯನಿಧಿ: | 8005. ರಾಜ್ಯ ಭವಿಷ್ಯ ನಿಧಿ. |
| ಕರ್ನಾಟಕ ಸರ್ಕಾರಿ ವಿಮಾ ಇಲಾಖೆ : | 8011.ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು-1 ಜಮೆ ನಿಧಿಗಳು. |

15) **ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:**- ಸರ್ಕಾರಿ ಕಂಪೆನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದು ನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

16) **ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:**- ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯಗಳನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

17) **ಗೃಹ ನಿರ್ಮಾಣ ಮುಂಗಡ:ಗೃಹ ಖರೀದಿ ಮುಂಗಡ: ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:**- ನಿಯೋಜಕರು ಪ್ರಸ್ತುತ ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

2. ದಿನಾಂಕ 11-7-1996 ಸಂಖ್ಯೆ. ಎಫ್‌ಡಿ 1 ಟಿಎಫ್‌ಪಿ 96ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪೂರ್ವಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 880

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 97, ದಿನಾಂಕ: 17.6.1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 98, ದಿನಾಂಕ: 6.8.1998.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 99, ದಿನಾಂಕ: 17.6.1999.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2000, ದಿನಾಂಕ: 25.3.2000.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2001, ದಿನಾಂಕ: 25.2.2001.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2002, ದಿನಾಂಕ: 1.6.2002 ಹಾಗೂ ಸೇರ್ಪಡೆ ಆದೇಶ, ದಿನಾಂಕ: 21.6.2002.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2003, ದಿನಾಂಕ: 16.6.2003.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 28 ಸಸಿವಿ 2004, ದಿನಾಂಕ: 28.4.2004.
9. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2004, ದಿನಾಂಕ: 19.11.2004.
10. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ: ಕಾಇ 44 ಸಿಎಲ್‌ಸಿ 2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 17.6.1997ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಒಂದು ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದ್ದಿತು.

| | | |
|---|---|---|
| 1. | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2. | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3. | ಸಹಾಯಕರು | 2 ಹುದ್ದೆಗಳು |
| 4. | ಶೀಘ್ರಲಿಪಿಗಾರರು | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ಗ್ರೂಪ್ ^ಡಿ^ | 2 ಹುದ್ದೆಗಳು |

ಈ ಹುದ್ದೆಗಳನ್ನು ಸರ್ಕಾರದ ವಿವಿಧ ಆದೇಶಗಳಲ್ಲಿ ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿರುತ್ತದೆ. ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 1.6.2002ರ ಆದೇಶ ಹಾಗೂ 21.6.2002ರ ಸೇರ್ಪಡೆ ಆದೇಶದಲ್ಲಿ ಈ ಹುದ್ದೆಗಳ ಪೈಕಿ ಒಂದು ದಲಾಯತ್ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ. ಪ್ರಸ್ತುತ ಬಾಲ ಕಾರ್ಮಿಕ ಕೋಶದ ಉಳಿದ ಹುದ್ದೆಗಳ ವಿಸ್ತರಿತ ಕಾಲಾವಧಿಯು ದಿನಾಂಕ: 17.6.2005ಕ್ಕೆ ಮುಕ್ತಾಯಗೊಳ್ಳಲಿದೆ. ಪ್ರಧಾನ ಕಾರ್ಯದರ್ಶಿ ಕಾರ್ಮಿಕ ಇಲಾಖೆ ಇವರು ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಾಲ ಕಾರ್ಮಿಕ ಕೋಶದ ವಿಶೇಷಾಧಿಕಾರಿ ಮತ್ತು ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) ಗಳನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಹುದ್ದೆಗಳೆಂದು ಪರಿಗಣಿಸಿದೆ. ಕ್ರಮ ಸಂಖ್ಯೆ (10)ರ ಕಡತದಲ್ಲಿ ಸದರಿ ಬಾಲ ಕಾರ್ಮಿಕ ಕೋಶವನ್ನು ದಿನಾಂಕ: 18.6.2005 ರಿಂದ ಮುಂದುವರೆಸುವ ಅವಶ್ಯಕತೆ ಇರುವುದರಿಂದ ಈ ಕೋಶವನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2005, ಬೆಂಗಳೂರು, ದಿನಾಂಕ:14ನೇ ಜೂನ್, 2005.**

ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 18.6.2005 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2. | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3. | ಸಹಾಯಕರು | 2 ಹುದ್ದೆಗಳು |
| 4. | ಶೀಘ್ರಲಿಪಿಗಾರರು | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ಗ್ರೂಪ್ ^ಡಿ^ | 1 ಹುದ್ದೆ |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 865

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ (ನಿ), ವಸತಿ ಇಲಾಖೆ ಇವರಿಗೆ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ, ವಸತಿ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ವಇ 236 ಕೆಕಾ 2004, ದಿನಾಂಕ: 11.2.2004, ಮತ್ತು ಅನಧಿಕೃತ ಟಿಪ್ಪಣಿ ಸಂಖ್ಯೆ: ವಇ 31 ಯುಹೆಚ್‌ಎಸ್: 2001 (ಭಾಗ–1), ದಿನಾಂಕ: 6.3.2004 ಮತ್ತು 1.4.2004.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಅರ 2004, ದಿನಾಂಕ: 27.5.2004.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಅರ 2004, ದಿನಾಂಕ: 13.9.2004.
4. ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ (ನಿ) ಇವರ, ಮನವಿ ದಿನಾಂಕ: 25.8.2004.
5. ಪೀಠಾಧಿಕಾರಿ–1 ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ವಇ 31 ಯುಹೆಚ್‌ಎಸ್ 2004, ದಿನಾಂಕ: 18.2.2005.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿ ದಿನಾಂಕ: 11.2.2004, 6.3.2004 ಮತ್ತು 1.4.2004 ರಲ್ಲಿ ಹೆಚ್ಚುವರಿ ಕಾರ್ಯದರ್ಶಿ, ವಸತಿ ಇಲಾಖೆ ಇವರು ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ (ನಿ) ಇವರು ವಸತಿ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 27.1.2004 ಮತ್ತು 29.3.2004ರ ಅವರ ಮನವಿಯಲ್ಲಿ ದಿನಾಂಕ: 1.10.2003 ರಿಂದ 27.3.2004 ರವರೆಗೆ ಕೌಟುಂಬಿಕ ಕಾರಣಗಳಿಂದಾಗಿ ಒಟ್ಟು 179 ದಿನಗಳು ಪರಿವರ್ತಿತ ರಜೆಯನ್ನು ಮಂಜೂರು ಮಾಡುವಂತೆ ಕೋರಿರುವ ಬಗ್ಗೆ ಶ್ರೀಯುತರು ನಿಗದಿತ ಸಮಯದಲ್ಲಿ ಹಾಗೂ ನಿಗದಿತ ರೀತಿಯಲ್ಲಿ ರಜೆ ಅರ್ಜಿಯನ್ನು ಸಲ್ಲಿಸದೆ ಇರುವುದರಿಂದ ದಿನಾಂಕ: 1.10.2003 ರಿಂದ 27.3.2004 ರವರೆಗೆ ಕಛೇರಿಗೆ ಅನಧಿಕೃತ ಗೈರು ಹಾಜರಾಗಿದ್ದಾರೆಂದು ತಿಳಿಸಿ, ಇವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವಂತೆ ಹಾಗೂ ಈ ವಿಷಯದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯೇ ತೀರ್ಮಾನ ತೆಗೆದುಕೊಳ್ಳುವಂತೆ ತಿಳಿಸಿರುವ ಮೇರೆಗೆ ಇವರ ಪ್ರಕರಣದಲ್ಲಿ ಮೇಲೆ ಓದಲಾದ ದಿನಾಂಕ: 27.5.2004ರ ಸರ್ಕಾರಿ ಆದೇಶದಲ್ಲಿ ದಿನಾಂಕ: 1.10.2003 ರಿಂದ 27.3.2004 ರವರೆಗೆ 179 ದಿನಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106–ಎ ಅನುಸಾರ ವೇತನ ರಹಿತ ರಜೆಯನ್ನು ಮಂಜೂರು ಮಾಡಲಾಗಿದೆ. ಹಾಗೂ ಈ ಗೈರು ಹಾಜರಿ ಅವಧಿಯನ್ನು ಅವರ ಖಾತೆಯಲ್ಲಿ ಜಮೆ ಇರುವ 179 ದಿನಗಳು ಅರ್ಧ ವೇತನ ರಜೆಗೆ ಲೆಕ್ಕ ಹಾಕಲಾಗಿದೆ.

ಮೇಲೆ ಓದಲಾದ ಆದೇಶ ದಿನಾಂಕ: 13.9.2004 ರಲ್ಲಿ ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ (ನಿ) ಇವರ ನಿವೃತ್ತಿಯ ದಿನಾಂಕ: 31.3.2004ಕ್ಕೆ ಖಾತೆಯಲ್ಲಿ ಜಮೆ ಇರುವ 240 ದಿನಗಳು ಗಳಿಕೆ ರಜೆ ನಗದೀಕರಣ ಮೊತ್ತದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 118 ಎ (2)ರ ಅನುಸಾರ ಅಧಿಕಾರಿಯವರ ದಿನಾಂಕ: 1.10.2003 ರಿಂದ 27.3.2004 ರವರೆಗಿನ ವೇತನ ರಹಿತ ರಜೆ ಮಂಜೂರಾತಿಗೆ ಸಂಬಂಧಿಸಿದಂತೆ ಇವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಮೊತ್ತ ರೂ. 90,037.00 (ರೂ. ತೊಂಬತ್ತು ಸಾವಿರದ ಮೂವತ್ತೇಳು ಮಾತ್ರ) ಕಟಾವು ಮಾಡಿಕೊಂಡು ನಂತರ ಉಳಿದ ಮೊತ್ತವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 118–ಎ (1) (ಎ) ಅನುಸಾರ ನಗದೀಕರಣವನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ದಿನಾಂಕ: 25.8.2004ರ ಮನವಿಯಲ್ಲಿ ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ (ನಿ) ಇವರು ಶ್ರೀಯುತರಿಗೆ ವೇತನ ರಹಿತ ರಜೆ ಮಂಜೂರು ಮಾಡಿರುವ ಮೇರೆಗೆ ಇವರ ವೇತನ ಹಾಗೂ ಭತ್ಯೆಗಳನ್ನು ಕಟಾಯಿಸಲಾಗಿರುವುದರಿಂದ ತೊಂದರೆಯಾಗಿದೆ ಎಂದು ತಿಳಿಸಿ ಕರ್ನಾಟಕ ಸರ್ಕಾರಿ ಸೇವಾ (ಸಿ.ಸಿ.ಎ) ನಿಯಮಾವಳಿ ನಿಯಮ 19 ರಡಿ ನಿಗದಿತ 3 ತಿಂಗಳ ಅವಧಿಯೊಳಗೆ ಮೇಲ್ಮನವಿಯನ್ನು ಸಲ್ಲಿಸಿ ದಿನಾಂಕ: 1.10.2003 ರಿಂದ 27.3.2004 ರವರೆಗೆ 179 ದಿನಗಳು ವೇತನ ರಹಿತ ರಜೆ ಮಂಜೂರು ಮಾಡಿರುವುದನ್ನು ಪುನರ್ ಪರಿಶೀಲಿಸಿ ಅವರ ಖಾತೆಯಲ್ಲಿ ಲಭ್ಯವಿರುವ ಪರಿವರ್ತಿತ ರಜೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಟಿಪ್ಪಣಿ ದಿನಾಂಕ: 18.2.2005 ರಲ್ಲಿ ವಸತಿ ಇಲಾಖೆಯ ಪೀಠಾಧಿಕಾರಿ ಇವರು ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ ಇವರಿಗೆ ದಿನಾಂಕ: 1.10.2003 ರಿಂದ 27.3.2004 ರವರೆಗೆ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಕಛೇರಿಗೆ ಅನಧಿಕೃತ ಗೈರು ಹಾಜರಾಗಿದ್ದು, ನಿಯಮವನ್ನು ಉಲ್ಲಂಘನೆ ಮಾಡಿರುವ ಮೇರೆಗೆ ಈ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮಕೈಗೊಳ್ಳುವಂತೆ ಶಿಫಾರಸ್ಸು ಮಾಡಲಾಗಿತ್ತು. ಈ ಮಧ್ಯ ಸದರಿ ಅಧಿಕಾರಿಯವರು ವಯೋ ನಿವೃತ್ತಿ ಹೊಂದಿದ್ದು, ಹಾಗೂ ಅವರ ಮೇಲ್ಮನವಿಯಲ್ಲಿ ಗೈರು ಹಾಜರಿಯ ಬಗ್ಗೆ ನೀಡಿರುವ ಕಾರಣವನ್ನು ಮಾನವೀಯತೆ ದೃಷ್ಟಿಯಿಂದ ಪರಿಗಣಿಸಿ ಈಗಾಗಲೇ ಅಧಿಕಾರಿಯವರಿಗೆ ದಂಡನೆ ರೂಪದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106–ಎ ಮೇರೆಗೆ ವೇತನ ರಹಿತ ರಜೆ ಮಂಜೂರು ಮಾಡಿ ಹೊರಡಿಸಿರುವ ಆದೇಶವನ್ನು ಹಿಂದಕ್ಕೆ ಪಡೆದು ನಿವೃತ್ತಿ ದಿನಾಂಕದಂದು ಇವರ ಖಾತೆಯಲ್ಲಿರುವ ರಜೆಯನ್ನು ಮಂಜೂರು ಮಾಡಿ ಮರು ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಹಾಗೂ ಈ ಟಿಪ್ಪಣಿಯನ್ನು ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರು ಅನುಮೋದಿಸಿರುವರು.

ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ ಇವರು ದಿನಾಂಕ: 31.3.2004 ರಂದು ವಯೋ ನಿವೃತ್ತಿ ಹೊಂದಿದ್ದು, ಇವರು ನಿವೃತ್ತಿ ಹೊಂದುವ ದಿನಾಂಕಕ್ಕೆ ಸೇವಾ ಪುಸ್ತಕದ ಅನುಸಾರ 504 ದಿನಗಳು ಅರ್ಧ ವೇತನ ರಜೆ ಜಮೆ ಇರುತ್ತದೆ. ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಅರ 2004, ಬೆಂಗಳೂರು, ದಿನಾಂಕ: 17ನೇ ಜೂನ್, 2005**

ಶ್ರೀ ಎಂ.ಗುಣಶೀಲನ್, ಅಧೀನ ಕಾರ್ಯದರ್ಶಿ (ನಿ) ಇವರು ದಿನಾಂಕ: 27.1.2004 ಮತ್ತು 29.3.2004 ರಂದು ಸಲ್ಲಿಸಿರುವ ರಜಾ ಅರ್ಜಿಯ ಪ್ರಪತ್ರಗಳಲ್ಲಿ ಕೌಟುಂಬಿಕ ಕಾರಣಗಳ ಮೇರೆಗೆ ರಜೆಯನ್ನು ಮಂಜೂರು ಮಾಡಲು ಕೋರಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114 (4) (ಸಿ) ಅನ್ವಯ ಖಾಸಗಿ ಕಾರಣಗಳ ಮೇರೆಗೆ ದಿನಾಂಕ: 1.10.2003 ರಿಂದ 28.1.2004 ರವರೆಗೆ 120 ದಿನಗಳು ಪರಿವರ್ತಿತ ರಜೆಯನ್ನು ಮಂಜೂರು ಮಾಡಲಾಗಿದೆ. ಹಾಗೂ ಇನ್ನುಳಿದ ಗೈರು ಹಾಜರಿಯ ಅವಧಿ ದಿನಾಂಕ: 29.1.2004 ರಿಂದ 27.3.2004 ರವರೆಗೆ 59 ದಿನಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 117 (ಎ)ರ ಅನುಸಾರ ಅಸಾಧಾರಣ ರಜೆಯನ್ನು ಮಂಜೂರು ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 723 ವೆಚ್ಚ–5/2005, ದಿನಾಂಕ: 6.5.2005ರ ಅನುಸಾರ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಯು.ಪಿ. ಪ್ರಭು**
**ಸರ್ಕಾರದ ಅಧೀನ ಕಾರ್ಯದರ್ಶಿಗಳು,**
**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).**

ಪಿ.ಆರ್. 867

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 97 (ಭಾಗ) ದಿನಾಂಕ: 17.4.1998.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 99, ದಿನಾಂಕ: 5.4.1999.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2000, ದಿನಾಂಕ: 26.5.2000.
4. ಸರ್ಕಾರದಿಂದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 2001, ದಿನಾಂಕ: 17.4.2002.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2002, ದಿನಾಂಕ: 6.5.2002.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2003, ದಿನಾಂಕ: 1.8.2003.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 2004, ದಿನಾಂಕ: 23.4.2004.
8. ಕಡತ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 120 ಎಂಎಸ್‌ಎಫ್ 2005.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 12.3.1998 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| 1. | ಹಿರಿಯ ಸಹಾಯಕ : ಭಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5. | ವಾಹನ ಚಾಲಕ | 1 ಹುದ್ದೆ |

ನಂತರ ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 23.4.2004ರ ಸರ್ಕಾರದ ಆದೇಶದನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 31.3.2005ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಈ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2005 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 2005, ಬೆಂಗಳೂರು, ದಿನಾಂಕ: 20ನೇ ಜೂನ್, 2005**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2005 ರಿಂದ 31.3.2006 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಹಿರಿಯ ಸಹಾಯಕ : ಭಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5. | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 888

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** Building Health cities ಯೋಜನೆ ಅಡಿಯಲ್ಲಿ ಬೆಂಗಳೂರು ನಗರವನ್ನು ಆರೋಗ್ಯ ನಗರವನ್ನಾಗಿ ನೋಡಿಕೊಳ್ಳಲು ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ರಚಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 817 ಸಿಜಿಎಂ 2004, ಬೆಂಗಳೂರು ದಿನಾಂಕ: 28ನೇ ಮೇ, 2005**

ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 10/11 ಜನವರಿ 2005ರಂದು ಬೆಂಗಳೂರಿನಲ್ಲಿ ನಡೆದ ಬಿಲ್ಡಿಂಗ್ ಹೆಲ್ತ್ ಸಿಟಿಸ್ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಬೆಂಗಳೂರು ನಗರವನ್ನು ಆರೋಗ್ಯ ನಗರವನ್ನಾಗಿ ರೂಪಿಸಲು ಅಧಿಕಾರಿ/ ಅಧಿಕಾರೇತರ ಸದಸ್ಯರನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಗಿದ್ದುದರ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರಿ/ ಅಧಿಕಾರೇತರ ಸದಸ್ಯರುಗಳನ್ನು ನೇಮಕ ಮಾಡಿ ಸಮಿತಿಯನ್ನು ರಚಿಸಿದೆ.

**ಅಧಿಕಾರಿಗಳು:**

1. ಮಾನ್ಯ ಮುಖ್ಯಮಂತ್ರಿಯವರು - ಅಧ್ಯಕ್ಷರು
2. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು - ಉಪಾಧ್ಯಕ್ಷರು
3. ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ - ಸದಸ್ಯರು
4. ಸರ್ಕಾರದ ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇಲಾಖೆ - ಸದಸ್ಯರು
5. ಸರ್ಕಾರದ ಕಾರ್ಯದರ್ಶಿಗಳು, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ - ಸದಸ್ಯರು
6. ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು - ಸದಸ್ಯರು
7. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು - ಸದಸ್ಯರು
8. ಆಯುಕ್ತರು, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು. - ಸದಸ್ಯರು
9. ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಬೆಂಗಳೂರು - ಸದಸ್ಯರು
10. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು - ಕನ್ವೀನರ್
11. ಆಯುಕ್ತರು, ಕಾರ್ಮಿಕ ಇಲಾಖೆ - ಸದಸ್ಯರು
12. ನಿರ್ದೇಶಕರು, ಪೌರಾಡಳಿತ ಇಲಾಖೆ, ಬೆಂಗಳೂರು - ಸದಸ್ಯರು
13. ಉಪಕುಲಪತಿ, ರಾಜೀವ್‌ಗಾಂಧಿ ಯೂನಿವರ್ಸಿಟಿ ಆಫ್ ಹೆಲ್ತ್ ಸೈನ್ಸ್, ಬೆಂಗಳೂರು. - ಸದಸ್ಯರು

**ಅಧಿಕಾರೇತರರು:**

1. ಶ್ರೀ ಕೆ.ಕೆ. ಸ್ವಾಮಿ, - ಸದಸ್ಯರು
   ಅಧ್ಯಕ್ಷರು, ಸಿ.ಐ.ಐ., ಕರ್ನಾಟಕ ಸ್ಟೇಟ್ ಕೌನ್ಸಿಲ್, ನಂ.1086,
   12ನೇ ಮೇನ್, ಎಚ್.ಎ.ಎಲ್. 2ನೇ ಹಂತ, ಬೆಂಗಳೂರು-560 008.

2. ಶ್ರೀ ಡಿ.ಎ. ಪ್ರಸನ್ನ, - ಸದಸ್ಯರು
ಅಧ್ಯಕ್ಷರು, ಹೆಲ್ತ್ ಕೇರ್ ಟಾಸ್ಕ್ ಫೋರ್ಸ್, ಸಿ.ಐ.ಐ. ನಂ.1086,
12ನೇ ಮೇನ್, ಎಚ್.ಎ.ಎಲ್. 2ನೇ ಹಂತ, ಬೆಂಗಳೂರು-560 008.
3. ಡಾ: ಭಾಭಾ ಹೊಕ್ಸತ್ರಾ, ಸಿ.ಐ.ಐ., - ಸದಸ್ಯರು
ಫಿಲಿಫ್ಸ್ ಸಾಫ್ಟ್‌ವೇರ್, ನಂ.1086, 12ನೇ ಮೇನ್, ಎಚ್.ಎ.ಎಲ್.
2ನೇ ಹಂತ, ಬೆಂಗಳೂರು-560 008.
4. ಡಾ: ದೇವಿಶೆಟ್ಟಿ, - ಸದಸ್ಯರು
ಅಧ್ಯಕ್ಷರು, ನಾರಾಯಣ ಹೃದಯಾಲಯ, ಬೆಂಗಳೂರು.
5. ಡಾ: ಥಾಮಸ್ ಚಾಂಡಿ, - ಸದಸ್ಯರು
ಅಧ್ಯಕ್ಷರು, ಹಾಸ್‌ಮಟ್ ಆಸ್ಪತ್ರೆ, ಬೆಂಗಳೂರು.
6. ಕಮಾಟೋರ್ ಇಂದ್ರು ವಾದ್ವಾನಿ, - ಸದಸ್ಯರು
ಅಧ್ಯಕ್ಷರು, ಮಲ್ಯ ಆಸ್ಪತ್ರೆ, ಬೆಂಗಳೂರು.
7. ಶ್ರೀ ವಿಶಾಲ ಬಾಲಿ, - ಸದಸ್ಯರು
ಅಧ್ಯಕ್ಷರು ವಕಾರ್ಟ್ ಆಸ್ಪತ್ರೆ, ಬೆಂಗಳೂರು.
8. ಶ್ರೀ ಇರ್ಫಾನ್ ರಝಾಕ್, - ಸದಸ್ಯರು
ವ್ಯವಸ್ಥಾಪಕ ನಿರ್ದೇಶಕರು, ಪ್ರೆಸ್ಟೀಜ್ ಎಸ್ಟೇಟ್ ಪ್ರೈ.ಲಿಮಿಟೆಡ್,
ಹಳೇ ಮದ್ರಾಸ್ ರಸ್ತೆ, ಬೆಂಗಳೂರು.
9. ಶ್ರೀ ಲಕ್ಷ್ಮೀನಾರಾಯಣ ವಿ. - ಸದಸ್ಯರು
ವ್ಯವಸ್ಥಾಪಕ ನಿರ್ದೇಶಕರು, ನಿರ್ಮಾಣ ಶೆಲ್ಟರ್ಸ್, ನಂ.71, ಕೆ.ಆರ್.ರಸ್ತೆ,
ಬಸವನಗುಡಿ, ಬೆಂಗಳೂರು-560 004.
10. ಬಿ.ಎಲ್.ಎಸ್. ಮೂರ್ತಿ, - ಸದಸ್ಯರು
ಮ್ಯಾನೇಜಿಂಗ್ ಟ್ರಸ್ಟೀ, ಬೆಂಗಳೂರು ವೆಸ್ಟ್ ಲಯನ್ಸ್ ಐ ಆಸ್ಪತ್ರೆ, ಜೆ.ಸಿ. ರಸ್ತೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಪಿ.ಆರ್. 894

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಸಿಆಸುಇ 131 ಸಅಸೇ 2004, ಬೆಂಗಳೂರು, ದಿನಾಂಕ: 17ನೇ ಜೂನ್, 2005**

ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಎರಡು ಅಪರ ಕಾರ್ಯದರ್ಶಿ ಹುದ್ದೆಗಳನ್ನು ಜಂಟಿ ಕಾರ್ಯದರ್ಶಿ ಹುದ್ದೆಗಳೆಂದು ನಿಮ್ನೀಕರಿಸಿದ ನಂತರ ಈ ಹುದ್ದೆಗಳ ನೇಮಕಾತಿ ವಿಧಾನ ನಿಗದಿ ಪಡಿಸುವ ಸಂಬಂಧದಲ್ಲಿ ಹೊರಡಿಸಲಾಗಿರುವ **ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 131 ಸಅಸೇ 2004, ದಿನಾಂಕ: 07.05.2005ರ** ಮೊದಲನೆ ಕಂಡಿಕೆಯ ಹೇಳಿಕೆ 2ನೇ ಕಾಲಂ ಹಾಗೂ 3ನೇ ಕಾಲಂನಲ್ಲಿನ ಮಾಹಿತಿಯನ್ನು ಈ ಕೆಳಕಂಡಂತೆ ಬದಲಾಯಿಸಿ ಓದಿಕೊಳ್ಳತಕ್ಕದ್ದು.

| | |
|---|---|
| "Assistant Draftsman and Ex-officio Deputy Secretary to Government" ಎಂಬುದಕ್ಕೆ ಬದಲಾಗಿ | "Assistant Draftsman and Ex-officio Under Secretary to Government" ಎಂಬುದಕ್ಕೆ ಬದಲಾಗಿ |
| "Assistant Draftsman & ex-officio Under/ Deputy Secretary to Government". | "Assistant Draftsman and ex-officio Under/ Deputy Secretary to Government". |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 895

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮಂಗಳೂರು ಮಹಾನಗರ ಪಾಲಿಕೆ-ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ಶೇಕಡಾ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಕುರಿತು.

**ಓದಲಾಗಿದೆ:** ಮಂಗಳೂರು ಮಹಾನಗರ ಪಾಲಿಕೆ ಆಯುಕ್ತರ ಪತ್ರ ಸಂಖ್ಯೆ: ಇಎಸ್‌ಟಿ (1) ಸಿಆರ್:14:2001-02, ದಿನಾಂಕ:07.01.2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಮಂಗಳೂರು ಮಹಾನಗರ ಪಾಲಿಕೆಯ ಪರಿಷತ್ತಿನ ಠರಾವು ಸಂ.99, 2002-03, ದಿನಾಂಕ: 28.09.2002ರಲ್ಲಿ ಮಂಗಳೂರು ಮಹಾನಗರ ಪಾಲಿಕೆಯ ಈ ಕೆಳಕಂಡ 'ಡಿ' ವರ್ಗದಲ್ಲಿ 77 ಹುದ್ದೆಗಳನ್ನು ರದ್ದುಗೊಳಿಸಲು ನಿರ್ಣಯಿಸಲಾಗಿದೆ ಎಂದು ತಿಳಿಸಿರುತ್ತಾರೆ.

| ಕ್ರ.ಸಂ. | ಪದನಾಮ | ರದ್ದುಪಡಿಸಬಹುದಾದ ಹುದ್ದೆಗಳ ಸಂಖ್ಯೆ |
|---|---|---|
| 1. | ಚೆಯಿನ್‌ಮ್ಯಾನ್ | 4 |
| 2. | ಮಜ್ದೂರ್ | 30 |
| 3. | ಫೌಂಟನ್ ಕ್ಲೀನರ್ | 2 |
| 4. | ಟಾರ್ನ್ ಕಾಕ್ | 5 |
| 5. | ಲಾರಿ ಕ್ಲೀನರ್ | 6 |
| 6. | ಫೀಲ್ಡ್ ಮೆನ್ | 30 |
| | ಒಟ್ಟು | 77 |

ಮಂಗಳೂರು ಮಹಾನಗರ ಪಾಲಿಕೆಯನ್ನು ಬೃಹತ್ ನಗರಪಾಲಿಕೆಯಾಗಿ ಪರಿವರ್ತಿಸಲಾಗಿದ್ದರು ಯಾವುದೇ ಹೆಚ್ಚುವರಿ ಹುದ್ದೆಗಳು ಮಂಜೂರಾಗದೆ ಇರುವುದರಿಂದ ಮಂಗಳೂರು ಮಹಾನಗರ ಪಾಲಿಕೆಯ ದಿನನಿತ್ಯದ ಕೆಲಸ ಕಾರ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಗ್ರೂಪ್-ಎ, ಬಿ ಮತ್ತು ಸಿ ವರ್ಗದಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಬೇಕಾದ ಅವಶ್ಯಕತೆ ಇರುವುದರಿಂದ ಪರಿಷತ್ತಿನ ನಿರ್ಣಯದಂತೆ ಗ್ರೂಪ್-ಡಿ ಯಲ್ಲಿನ 77 ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 65 ಎಂಎಂಸಿ 2005, ಬೆಂಗಳೂರು, ದಿನಾಂಕ: 14ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮಂಗಳೂರು ಮಹಾನಗರ ಪಾಲಿಕೆಯ ಪರಿಷತ್ತಿನ ಠರಾವು ಸಂಖ್ಯೆ: 99: 2002-03, ದಿನಾಂಕ: 28.09.2002ರ ನಿರ್ಣಯದಂತೆ ಮಂಗಳೂರು ಮಹಾನಗರ ಪಾಲಿಕೆಯ ಗ್ರೂಪ್-ಡಿ ವೃಂದದಲ್ಲಿ ಖಾಲಿ ಇರುವ ಹುದ್ದೆಗಳನ್ನು ಈ ಕೆಳಕಂಡ 77 (ಎಪ್ಪತ್ತೇಳು) ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| ಕ್ರ.ಸಂ. | ಪದನಾಮ | ರದ್ದುಪಡಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1. | ಚೆಯಿನ್‌ಮ್ಯಾನ್ | 4 (ನಾಲ್ಕು) |
| 2. | ಮಜ್ದೂರ್ | 30 (ಮೂವತ್ತು) |
| 3. | ಫೌಂಟನ್ ಕ್ಲೀನರ್ | 2 (ಎರಡು) |
| 4. | ಟಾರ್ನ್ ಕಾಕ್ | 5 (ಐದು) |
| 5. | ಲಾರಿ ಕ್ಲೀನರ್ | 6 (ಆರು) |
| 6. | ಫೀಲ್ಡ್ ಮೆನ್ | 30 (ಮೂವತ್ತು) |
| | ಒಟ್ಟು | 77 (ಎಪ್ಪತ್ತೇಳು) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್‌ಕುಮಾರ್**

ಪಿ.ಆರ್. 896

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಸಾರಿಗೆ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಸಾರಿಇ 319, ಸಾಇಪ 2004, ಬೆಂಗಳೂರು, ದಿನಾಂಕ: 6ನೇ ಜೂನ್, 2005**

**ವಿಷಯ:** ಪುತ್ತೂರು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಯನ್ನು ಪ್ರಾದೇಶಿಕ ಸಾರಿಗೆ ಕಛೇರಿಯನ್ನಾಗಿ ಉನ್ನತೀಕರಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ: ಸಾರಿಇ 319 ಸಾಇಪ 2004, ದಿನಾಂಕ: 07.03.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಆದೇಶದಲ್ಲಿ ಪುತ್ತೂರು ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು "ಪ್ರಾದೇಶಿಕ ಸಾರಿಗೆ ಕಛೇರಿಯನ್ನಾಗಿ ಉನ್ನತೀಕರಿಸಲಾಗಿದೆ" ಎಂಬುದರ ಜೊತೆಗೆ ಈ ಕೆಳಕಂಡ ವಿಷಯವನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

"ಸದರಿ ಉನ್ನತೀಕರಣ ಮೊದಲ ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಾರ್ಯಭಾರ ವಹಿಸಿಕೊಂಡ ನಂತರದಿಂದ ಕಾರ್ಯರೂಪಕ್ಕೆ ಬರುತ್ತದೆ, ಹಾಗೂ ಸದರಿ ಕಛೇರಿಯಲ್ಲಿರುವ ಸಹಾಯಕ ಪ್ರಾದೇಶಿಕ ಅಧಿಕಾರಿಗಳ ಹುದ್ದೆ ರದ್ದಾಗುವುದಲ್ಲದೇ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ವೃಂದದಲ್ಲಿ ಒಂದು ಹುದ್ದೆ ಕಡಿತಗೊಳಿಸಲಾಗುತ್ತದೆ ಮತ್ತು ಹೊಸ ಹುದ್ದೆಯನ್ನು ಸೃಜಿಸಲಾಗುವುದಿಲ್ಲ ಎಂಬ ಷರತ್ತಿಗೊಳಪಟ್ಟಿರುತ್ತದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಾಸುದೇವ**

ಪಿ.ಆರ್. 897

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

### ಸೇರ್ಪಡೆ ಆದೇಶ

**ಸಂಖ್ಯೆ: ಸಾರಿಇ 209, ಸಾಇಪ 2004, ಬೆಂಗಳೂರು, ದಿನಾಂಕ: 6ನೇ ಜೂನ್, 2005**

**ವಿಷಯ:** ಯಾದಗಿರಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಯನ್ನು ಪ್ರಾದೇಶಿಕ ಸಾರಿಗೆ ಕಛೇರಿಯನ್ನಾಗಿ ಉನ್ನತೀಕರಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ: ಸಾರಿಇ 209 ಸಾಇಪ 2004, ದಿನಾಂಕ: 07.03.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಆದೇಶದಲ್ಲಿ ಯಾದಗಿರಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು "ಪ್ರಾದೇಶಿಕ ಸಾರಿಗೆ ಕಛೇರಿಯನ್ನಾಗಿ ಉನ್ನತೀಕರಿಸಲಾಗಿದೆ" ಎಂಬುದರ ಜೊತೆಗೆ ಈ ಕೆಳಕಂಡ ವಿಷಯವನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

"ಸದರಿ ಉನ್ನತೀಕರಣ ಮೊದಲ ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಾರ್ಯಭಾರ ವಹಿಸಿಕೊಂಡ ನಂತರದಿಂದ ಕಾರ್ಯರೂಪಕ್ಕೆ ಬರುತ್ತದೆ, ಹಾಗೂ ಸದರಿ ಕಛೇರಿಯಲ್ಲಿರುವ ಸಹಾಯಕ ಪ್ರಾದೇಶಿಕ ಅಧಿಕಾರಿಗಳ ಹುದ್ದೆ ರದ್ದಾಗುವುದಲ್ಲದೇ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ವೃಂದದಲ್ಲಿ ಒಂದು ಹುದ್ದೆ ಕಡಿತಗೊಳಿಸಲಾಗುತ್ತದೆ ಮತ್ತು ಹೊಸ ಹುದ್ದೆಯನ್ನು ಸೃಜಿಸಲಾಗುವುದಿಲ್ಲ ಎಂಬ ಷರತ್ತಿಗೊಳಪಟ್ಟಿರುತ್ತದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ವಾಸುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

ಪಿ.ಆರ್. 898

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನೆ ಅಧಿಕಾರಿ ಹಾಗೂ ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನೆ ಅಧಿಕಾರಿ, ಹಾಗೂ ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರುಗಳು ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಚಾಮರಾಜನಗರ ಜಿಲ್ಲೆಗೆ ಸೇರಿದ 2001-02ನೇ ಸಾಲಿನಲ್ಲಿ ಆಡಳಿತ ಮಟ್ಟದ ಉನ್ನತೀಕರಣಕ್ಕಾಗಿ ಮತ್ತು ಕಛೇರಿಯ ಆಧುನೀಕರಣ ಸಂಬಂಧ ಪೀಠೋಪಕರಣಗಳು, ಯಂತ್ರೋಪಕರಣಗಳು ಹಾಗೂ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ನೀತಿ ನಿಯಮಗಳನ್ನು ಉಲ್ಲಂಘಿಸಿ ಅನುದಾನ ಬಿಡುಗಡೆ ಮಾಡಿ ಹಣ ದುರುಪಯೋಗ ಮಾಡಿದ ದುರ್ನಡತೆಯನ್ನು ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನೆ ಅಧಿಕಾರಿ ಹಾಗೂ ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್, ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಸರ್ಕಾರ ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನೆ ಅಧಿಕಾರಿ ಹಾಗೂ ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್, ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 900

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 2004 ದಿನಾಂಕ: 09.06.2004.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 5 ಎಸ್‌ಇಪಿ (ಉಫ) 2005, ದಿನಾಂಕ: 27.05.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:09.06.2004ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ: ಜಂಟಿ ಕಾರ್ಯದರ್ಶಿ: ಅಪರ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 25.06.2004ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ. ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ: 24.06.2005ಕ್ಕೆ ಮುಕ್ತಾಯಗೊಳ್ಳಲಿದೆ.

ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 27.05.2005ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಯನ್ನು ದಿನಾಂಕ: 25.06.2005ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಸಸಿವಿ 2005, ಬೆಂಗಳೂರು, ದಿನಾಂಕ: 20ನೇ ಜೂನ್, 2005**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 25.06.2005 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 886

**ವಿಷಯ:** ಡಾ: ಹೆಚ್.ಹೊನ್ನೇಗೌಡ, ನಿರ್ದೇಶಕರು (ತಾಂತ್ರಿಕ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಹಾಗೂ ನಿರ್ದೇಶಕರು, ಕೆ.ಎಸ್.ಆರ್.ಎಸ್.ಎ.ಸಿ. ಇವರಿಗೆ ಆಸ್ಟ್ರೇಲಿಯಾ ಹಾಗೂ ಸಿಂಗಪೂರ್ ದೇಶಗಳಿಗೆ ಪ್ರವಾಸ ಕೈಗೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ಕಡತ ಸಂಖ್ಯೆ: ಐಟಿಡಿ 7 ಪಿಐಎಸ್ 2005.
2. ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 133 ಸಅಸೇ 2005, ದಿನಾಂಕ: 02.06.2005.
3. ಕೇಂದ್ರ ಸರ್ಕಾರದ ವಿದೇಶಾಂಗ ವ್ಯವಹಾರ ಸಚಿವಾಲಯ (ದಕ್ಷಿಣ ವಿಭಾಗ) ನವದೆಹಲಿ ಇವರ ಪತ್ರ ಸಂಖ್ಯೆ: ಎಸ್/ 122/ 2/ 05, ದಿನಾಂಕ: 03.06.2005.
4. ಕೇಂದ್ರ ಸರ್ಕಾರದ ಹಣಕಾಸು ಸಚಿವಾಲಯದ ಫ್ಯಾಕ್ಸ್ ಸಂದೇಶ ದಿನಾಂಕ: 09.06.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ಕಡತದಲ್ಲಿ ಡಾ: ಹೆಚ್. ಹೊನ್ನೇಗೌಡ, ನಿರ್ದೇಶಕರು (ತಾಂತ್ರಿಕ) ಹಾಗೂ ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ (ಕೆ.ಎಸ್.ಆರ್.ಎಸ್.ಎ.ಸಿ.) ಇವರು ಆಸ್ಟ್ರೇಲಿಯಾಗೆ ದಿನಾಂಕ: 04.06.2005 ರಿಂದ 15.06.2005 ರವರೆಗೆ ಹಾಗೂ ಸಿಂಗಪುರಕ್ಕೆ ದಿನಾಂಕ: 16.06.2005ರಿಂದ 18.06.2005 ರವರೆಗೆ ಪ್ರವಾಸ ಕೈಗೊಳ್ಳುತ್ತಿದ್ದು, ಈ ಪ್ರವಾಸದಿಂದ ಮೇಲ್ಕಂಡ ದೇಶಗಳಲ್ಲಿ ನಡೆಯುತ್ತಿರುವ ವೈಜ್ಞಾನಿಕ ಮತ್ತು ಸಂಶೋಧನಾತ್ಮಕ ವಿಷಯಗಳು ಹಾಗೂ ಇತರೆ ಯೋಜನೆ ಸಾಧನೆಗಳ ಬಗ್ಗೆ ಕೂಲಂಕಷವಾಗಿ ತಿಳಿದುಕೊಳ್ಳಲು ಹಾಗೂ ಇದರಿಂದ ನಮ್ಮಲ್ಲಿ ನಡೆಯುತ್ತಿರುವ ಹಲವಾರು ಕಾರ್ಯಕ್ರಮಗಳನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಗುಣಾತ್ಮಕವಾಗಿ ಉನ್ನತೀಕರಿಸಲು ಸಹಕಾರಿಯಾಗುತ್ತದೆಂದೂ ಈ ಪ್ರವಾಸದ ಒಟ್ಟು ಅಂದಾಜು ವೆಚ್ಚ ರೂ.2,65,000.00ಗಳನ್ನು ಕೇಂದ್ರ ಸರ್ಕಾರವು ಅನುಷ್ಠಾನಗೊಳಿಸುತ್ತಿರುವ ಕೋಷ್ಟಲ್ ಎನ್.ಆರ್.ಐ.ಎಸ್. ಮತ್ತು ಇತರೆ ಯೋಜನೆಗಳಿಂದ ಭರಿಸಲಾಗುವುದೆಂದು ತಿಳಿಸುತ್ತಾ, ಸದರಿ ಅಧಿಕಾರಿಗಳ ವಿದೇಶ ಪ್ರವಾಸಕ್ಕೆ ಅನುಮತಿ ನೀಡುವಂತೆ ಕೋರಲಾಗಿರುತ್ತದೆ.

ಕೇಂದ್ರ ಸರ್ಕಾರದ ವಿದೇಶಾಂಗ ವ್ಯವಹಾರ ಹಾಗೂ ಹಣಕಾಸು ಸಚಿವಾಲಯಗಳು ಮೇಲೆ ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ಓದಲಾದ ಪತ್ರ ಹಾಗೂ ಫ್ಯಾಕ್ಸ್ ಸಂದೇಶಗಳಲ್ಲಿ ಡಾ: ಹೆಚ್. ಹೊನ್ನೇಗೌಡ ಇವರ ಆಸ್ಟ್ರೇಲಿಯಾ ಹಾಗೂ ಸಿಂಗಪುರ ದೇಶಗಳ ಪ್ರವಾಸ ಪ್ರಸ್ತಾವನೆಗೆ ಅನುಮೋದನೆಯನ್ನು ನೀಡಲಾಗಿರುತ್ತದೆ.

ಆದುದರಿಂದ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 133 ಸಅಸೇ 2005, ಬೆಂಗಳೂರು, ದಿನಾಂಕ: 20ನೇ ಜೂನ್, 2005**

ಡಾ: ಹೆಚ್.ಹೊನ್ನೇಗೌಡ, ನಿರ್ದೇಶಕರು (ತಾಂತ್ರಿಕ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಹಾಗೂ ನಿರ್ದೇಶಕರು, ಕೆ.ಎಸ್.ಆರ್.ಎಸ್.ಎ.ಸಿ. ಇವರು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಿನಾಂಕ: 04.06.2005 ರಿಂದ 18.06.2005 ರವರೆಗೆ ಆಸ್ಟ್ರೇಲಿಯಾ ಹಾಗೂ ಸಿಂಗಪೂರ್ ದೇಶಗಳಿಗೆ ಪ್ರವಾಸ ಕೈಗೊಳ್ಳಲು- ಈ ಪ್ರವಾಸದ ಸಂಪೂರ್ಣ ವೆಚ್ಚ (ರೂ.2,65,000.00) ವನ್ನು ಕೆ.ಎಸ್.ಆರ್.ಎಸ್.ಎ.ಸಿ. ನಿಧಿಯಿಂದ ಭರಿಸುವ ಷರತ್ತಿಗೊಳಪಟ್ಟು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 9 ಎಸ್‌ಆರ್‌ಎ 2000, ದಿನಾಂಕ: 20.11.2003 ರಲ್ಲಿರುವ ಸೂಚನೆಗಳಿಗೊಳಪಟ್ಟು ಅನುಮತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 320 ಸೇ-4/2005, ದಿನಾಂಕ: 31.05.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 887

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹಬೀಬುಲ್ಲಾ, ಪಿಐ., ಐಜಿಪಿ., ಕೇಂದ್ರ ವಲಯ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರ ಆದೇಶಸಂಖ್ಯೆ:ಪನ್ಸಿ/2/2000.ಓಬಿ 560/2000-01, ದಿನಾಂಕ:06-01-2001.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಕೇಂದ್ರ ವಲಯ ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/88/2000-02, ಓಬಿ-25/2001-02. ದಿನಾಂಕ:21-04-2001.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:22-09-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬ್ಬಿ/8/40/2004-05. ದಿನಾಂಕ:15-02-2005.

**ಪ್ರಸ್ತಾವನೆ:**

ಶ್ರೀ ಹಬೀಬುಲ್ಲಾ ಪಿಎಸ್‌ಐ (ಕಾನೂನು ಮತ್ತು ಸುವ್ಯವಸ್ಥೆ) ಹಿಂದೆ ಪಾವಗಡ ಠಾಣೆ ಹಾಲಿ ಚಿಕ್ಕನಾಯಕನಹಳ್ಳಿ ಠಾಣೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮ ಗಳು) ನಿಯಮಾವಳಿ 1965ರ ನಿಯಮ 7 ರಡಿ ದೋಷರೋಪಣೆ ಪತ್ರವನ್ನು ಹೊರಡಿಸಲಾಗಿತ್ತು.

**ದೋಷರೋಪಣೆ:** "ಪಾವಗಡ ನ್ಯಾಯಾಲಯದ ಸಿ.ಸಿ ಸಂಖ್ಯೆ:389/99 ರ ಪ್ರಕರಣವು ಒಂದು ಮಹತ್ವದ ಪ್ರಕರಣವಾಗಿದ್ದು, ಇದರಲ್ಲಿ ನ್ಯಾಯಾಲಯದಿಂದ ವಾರೆಂಟನ್ನು ಸಂಬಂಧಿಸಿದವರಿಗೆ ಸಿಬ್ಬಂದಿಯವರ ಮುಖಾಂತರ ಜಾರಿ ಮಾಡಿಸಲು 7 ತಿಂಗಳ ವಿಳಂಬ ಮಾಡಿ, ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ನೀಡಿ, ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:06-01-2001ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಮುಂಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಮುಂಬಡ್ತಿಗೆ ಅನ್ವಯವಾಗದಂತೆ 6 (ಆರು) ತಿಂಗಳಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಕೇಂದ್ರ ವಲಯ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:21-04-2001ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇತರ ದಾಖಲೆಗಳನ್ನು ಪರಿಶೀಲಿಸಲಾಗಿದೆ. ನ್ಯಾಯಾಲಯದ ವಾರೆಂಟ್ ಅನ್ನು ಜಾರಿಗೊಳಿಸಲು ವಿಳಂಬ ಮಾಡಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 196 ಪೊಸಿಅ 2004, ಬೆಂಗಳೂರು, ದಿನಾಂಕ: 9ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹಬೀಬುಲ್ಲಾ ಪಿಎಸ್ಐ ಹಾಲಿ ಪಿಎ ಕೇಂದ್ರ ವಲಯ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 860

**ವಿಷಯ:** ಶ್ರೀ ಸಿ.ಗೋಪಾಲ್, ಎಎಸ್ಐ (ನಿಸ್ತಂತು), ಮಂಡ್ಯ ಜಿಲ್ಲೆ ರವರು, ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಮಂಡ್ಯ ಜಿಲ್ಲೆ, ಮಂಡ್ಯ ಇವರ ಆದೇಶ ಸಂಖ್ಯೆ:ಸಿಬ್ಬಂದಿ/2/ಪಿಆರ್ /39/03-04, ದಿನಾಂಕ:24-01-2004. ಓಬಿ ಸಂಖ್ಯೆ:423/03-04.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ದಕ್ಷಿಣ ವಲಯ ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು/40/2003-04, ದಿನಾಂಕ:23-07-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-09-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/ 58/2004. ದಿನಾಂಕ:24-12-2004.

**ಪ್ರಸ್ತಾವನೆ:**

ಶ್ರೀ ಸಿ.ಗೋಪಾಲ್ ASI (ನಿಸ್ತಂತು) ಮಂಡ್ಯ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿ ದೋಷರೋಪಣಾ ಪತ್ರವನ್ನು ಹೊರಡಿಸಲಾಗಿದೆ.

**ದೋಷರೋಪಣೆ:** "1. ದಿನಾಂಕ:24-10-2003ರಂದು ರಾತ್ರಿ 9-35 ಗಂಟೆಯಲ್ಲಿ ನೀವು ಮಂಡ್ಯ ಸಿಟಿ ಕಂಟ್ರೋಲ್ ರೂಮ್ ಕರ್ತವ್ಯದಲ್ಲಿದ್ದಾಗ ಸಿಪಿಐ ಮಂಡ್ಯ ನಗರ ವೃತ್ತ ಇವರು ಮಂಡ್ಯ ಸಿಟಿ ಕಂಟ್ರೋಲ್ ರೂಂ ದೂರವಾಣಿ ಸಂಖ್ಯೆ:100 ಕ್ಕೆ ಕರೆ ಮಾಡಿದಾಗ ದುರಸ್ಥಿಯಲ್ಲಿ ರುತ್ತದೆ ಎಂಬ ಉತ್ತರ ಬಂದಿದ್ದು, ನಂತರ ಪಿಎಸ್ಐ ಮಂಡ್ಯ ಪಶ್ಚಿಮ ಪೊಲೀಸ್ ಠಾಣೆ ಇವರು ಸಹ ಕರೆ ಮಾಡಿದಾಗ ಇದೇ ಉತ್ತರ ಬಂದಾಗ ಸಿಪಿಐ ಮಂಡ್ಯ ವೃತ್ತ ಹಾಗೂ ಪಿಎಸ್ಐ ಪಶ್ಚಿಮ ಠಾಣೆ ಇವರು ಮಂಡ್ಯ ಸಿಟಿ ಕಂಟ್ರೋಲ್ ರೂಂಗೆ ಬಂದು ಪರಿಶೀಲಿಸಿದಾಗ ನೀವು ದೂರವಾಣಿಯ ರಿಸೀವರ್ ಅನ್ನು ಎತ್ತಿ ಪಕ್ಕಕ್ಕೆ ಇಟ್ಟಿರುತ್ತೀರಿ. ಈ ಬಗ್ಗೆ ಸಿಪಿಐ ರವರು ಪ್ರಶ್ನಿಸಿ ಕೇಳಿದಾಗ ನೀವು ಏರು ಧ್ವನಿಯಲ್ಲಿ ಈ ದೂರವಾಣಿಗೆ ಪದೇ ಪದೇ ಕರೆ ಮಾಡಿ ಏಕವಚನದಲ್ಲಿ ನಿಂದಿಸಿರುತ್ತಾರೆ ಎಂದು ಉತ್ತರಿಸಿರುತ್ತೀರಿ.

2. ಈ ದೂರವಾಣಿಗೆ ಐ.ಡಿ.ಕಾಲರ್ ಇದ್ದರೂ ಸಹ ನೀವು ಯಾರು ದೂರವಾಣಿ ಮಾಡಿ ನಿಂದಿಸಿರುತ್ತಾರೆ ಎಂಬುದನ್ನು ಸ್ಪಷ್ಟವಾಗಿ ಹೇಳಿರುವುದಿಲ್ಲ. ಹಾಗೂ ಈ ಸಂಬಂಧವಾಗಿ ನೀವು ಸ್ಥಳೀಯ ಪೊಲೀಸ್‌ರಿಗೆ ಲಿಖಿತ ಮೂಲಕ ದೂರನ್ನು ಸಲ್ಲಿಸಿರುವುದಿಲ್ಲ ಅಥವಾ ಈ ಕಛೇರಿಗೆ ವರದಿ ಸಲ್ಲಿಸಿರುವುದಿಲ್ಲ.

3. ಮಂಡ್ಯ ಸಿಟಿ ಕಂಟ್ರೋಲ್ ರೂಂ ದೂರವಾಣಿ 100 ನ್ನು ಸಾರ್ವಜನಿಕರ ಅನುಕೂಲಕ್ಕಾಗಿ ಹಾಗೂ ಮಾಹಿತಿಯನ್ನು ಮೇಲಾಧಿಕಾರಿಯವರ ಗಮನಕ್ಕೆ ತರಲು ಬಳಸುವ ದೂರವಾಣಿಯ ರಿಸೀವರ್‌ನ್ನು ಪಕ್ಕಕ್ಕೆ ತೆಗೆದಿಟ್ಟು ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:24-01-2004ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗೆ ತೊಂದರೆ ಆಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ದಕ್ಷಿಣ ವಲಯ ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23-07-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತಿನ ಇಲಾಖೆಯ ದಿನ ನಿತ್ಯದ ಕೆಲಸಗಳಲ್ಲಿ ನಿಸ್ತಂತು ವಿಭಾಗದ ಸೇವೆಯು ಅತ್ಯಂತ ಪ್ರಮುಖವಾಗಿದ್ದು, ತುರ್ತು ವಿಷಯಗಳನ್ನು ವಿನಿಮಯ ಮಾಡಿಕೊಳ್ಳಲು ಇರುವ ದೂರವಾಣಿ ಸಂಖ್ಯೆ:100ರ ರಿಸೀವರನ್ನು ಅರ್ಜಿದಾರರು ಪಕ್ಕಕ್ಕೆ ತೆಗೆದುಇಟ್ಟಿರುವುದರ ಜೊತೆಗೆ ಅದನ್ನು ಪ್ರಶ್ನಿಸಿದ CPI ರವರೊಂದಿಗೆ ಉದ್ಧಟತನದಿಂದ ವರ್ತಿಸಿರುವುದು, ಅರ್ಜಿದಾರರ ಅಶಿಸ್ತು ಹಾಗೂ ದುರ್ನಡತೆಗೆ ಸಾಕ್ಷಿಯಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 197 ಪೊಸಿಅ 2004, ಬೆಂಗಳೂರು, ದಿನಾಂಕ: 9ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಗೋಪಾಲ್ ASI (ನಿಸ್ತಂತು) ಮಂಡ್ಯ ಜಿಲ್ಲೆ ಮಂಡ್ಯ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 864

**ವಿಷಯ:** ಶ್ರೀ ಸೈಯದ್ ನಜೀರ್, ಹವಾಲ್ದಾರ್ 10, 1ನೇ ಪಡೆ, ಕೆ.ಎಸ್.ಆರ್.ಪಿ. ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ,ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/20/2002-03, ಓಬಿ ಸಂಖ್ಯೆ:237/2003-04 ದಿನಾಂಕ:22-10-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ ಕೆ.ಎಸ್.ಆರ್.ಪಿ.ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/16/2003-04.ದಿನಾಂಕ:16-02-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13-04-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/24/2004, ದಿನಾಂಕ:01-12-2004.

**ಪ್ರಸ್ತಾವನೆ:**

ಶ್ರೀ ಸೈಯದ್ ನಜೀರ್, ಹವಾಲ್ದಾರ್ 10, 1ನೇ ಪಡೆ, ಕೆ.ಎಸ್.ಆರ್.ಪಿ. ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** ''ಶ್ರೀ ರಮೇಶ್ ಬೋರ್ಗವೆ, RSI ಇವರು, ಶ್ರೀ ಶಂಕರ್ RPI ಇವರನ್ನು ಸ್ಟೋರ್ಸ್ ಮೀಟಿಂಗ್‌ಗೆ ಪೊಲೀಸ್ ಪ್ರಧಾನ ಕಚೇರಿಗೆ ತುರ್ತಾಗಿ ಕರೆದುಕೊಂಡು ಹೋಗಿ ಬಿಟ್ಟು ಬರಲು ತಿಳಿಸಿದಾಗ,ಅವರಿಗೆ ಅವಾಚ್ಯ ಶಬ್ದಗಳಿಂದ ಬೈಯ್ದು, ಅಸಭ್ಯವಾಗಿ ವರ್ತಿಸಿ, ಅವರ ಆದೇಶವನ್ನು ಪಾಲಿಸದೆ ದುರ್ನಡತೆ ಪ್ರದರ್ಶಿಸಿರುವುದು.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:22-10-2003ರ ಆದೇಶದಲ್ಲಿ ಅರ್ಜಿದಾರರಿಗೆ ಇನ್ನು ಮುಂದೆ ಈ ರೀತಿ ದುರ್ನಡತೆಯಿಂದ ವರ್ತಿಸದಂತೆ 'ಎಚ್ಚರಿಕೆ' ನೀಡಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:16-02-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಕಚೇರಿ ಕರ್ತವ್ಯಕ್ಕಾಗಿಯೇ ಅರ್ಜಿದಾರರು ಮತ್ತು ಆರ್‌ಎಸ್‌ಐ ರವರು ಅವಾಚ್ಯ ಶಬ್ದಗಳಿಂದ ಜಗಳವಾಡಿದ್ದು, ಇನ್ನು ಮುಂದೆ ಇಂತಹ ಸಂದಿಗ್ಧ ಪರಿಸ್ಥಿತಿಗೆ ಅನುವು ಮಾಡಿಕೊಡಬಾರದೆಂದು ಶಿಸ್ತು ಪ್ರಾಧಿಕಾರಿ 'ಎಚ್ಚರಿಕೆ' ನೀಡಿದ ಶಿಕ್ಷೆ ವಿಧಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಈ ಲಘು ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 82 ಪೊಸಿಆ 2004, ಬೆಂಗಳೂರು, ದಿನಾಂಕ: 9ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸೈಯದ್ ನಜೀರ್, ಹವಾಲ್ದಾರ್ 10, 1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 861

**ವಿಷಯ:** ಶ್ರೀಮತಿ ನಾಗಮ್ಮ, ಮಹಿಳಾ ಪೇದೆ 1469, ಬೀದರ್ ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು ಬೀದರ್, ಇವರ ಆದೇಶ ಸಂಖ್ಯೆ:9/ಬಿಎಸ್‌ಡಿ/ಪಿಆರ್/04.ದಿನಾಂಕ:15-05-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಬೀದರ್, ಇವರ ಆದೇಶ ಸಂಖ್ಯೆ:ಅಪೀಲು/5/ಸಿಬ್ಬಂದಿ/04/ಅಶಿ-04, ದಿನಾಂಕ:28-07-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-09-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/57/2004. ದಿನಾಂಕ:24-02-2005.

**ಪ್ರಸ್ತಾವನೆ:**

ಶ್ರೀಮತಿ ನಾಗಮ್ಮ ಮಹಿಳಾ ಪೇದೆ 1469, ಬೀದರ್ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿಯಲ್ಲಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**''ನೂತನ ನಗರ ಠಾಣೆಯಲ್ಲಿ ಗಣಕ ಯಂತ್ರದಲ್ಲಿ ಠಾಣೆಯ ದಾಖಲಾತಿಗಳು ಅಂದರೆ 3 ತಿಂಗಳಿಂದ ನಮೂನೆಗಳಲ್ಲಿ ತುಂಬಲು ಸಹಾಯಕ್ಕಾಗಿ ಪಿಸಿ 1154 ರವರಿಗೆ ಕೊಟ್ಟಾಗ್ಯೂ ಕೂಡಾ ಎಫ್‌ಐರ್‌ಗಳು ಮಾತ್ರ ತುಂಬಿ ಉಳಿದ 6 ನಮೂನೆಗಳನ್ನು ತುಂಬಿದೆ ಹಾಗೆ ಇಟ್ಟು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು ಮೇಲಾಧಿಕಾರಿಯವರ ಆದೇಶ ಉಲ್ಲಂಘನೆ ಮಾಡಿದ್ದು ಇದೆ.''

ಮೇಲ್ಕಂಡ ಆರೋಪದ ಮೇಲೆ ದೋಷರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪಾಧೀಕ್ಷಕರು, ಬೀದರ್ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:15-05-2004ರ ಆದೇಶದಲ್ಲಿ ಅರ್ಜಿದಾರರಿಗೆ ಮುಂಬರುವ ವಾರ್ಷಿಕ ಮುಂಬಡ್ತಿ ವೇತನವನ್ನು ಮುಂದಿನ ವಾರ್ಷಿಕ ವೇತನ ಮುಂಬಡ್ತಿಗೆ ಪರಿಣಾಮ ಬೀರದಂತೆ ಒಂದು ವರ್ಷದ ವರೆಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:28-07-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು, ದೋಷರೋಪಣಾ ಪತ್ರವನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮೂರು ತಿಂಗಳಿನಿಂದ ಸಹಾಯಕ ಪೇದೆಯನ್ನು ಕೊಟ್ಟಿದ್ದಾಗ್ಯೂ ಸಹ, ಎಫ್‌ಐಆರ್‌ಗಳನ್ನು ಮಾತ್ರ ತುಂಬಿ, ಉಳಿದ ಆರು ನಮೂನೆಗಳನ್ನು ತುಂಬದೇ ಹಾಗೆ ಇಟ್ಟಿರುವುದು, ಕರ್ತವ್ಯ ವಿಮುಖತೆ ತೋರಿಸುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು ಶಿಸ್ತು ಪ್ರಾಧಿಕಾರಿಯು ಅತೀ ಲಘು ದಂಡನೆ ವಿಧಿಸಿದ್ದು, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 202 ಪೊಸಿಆ 2004, ಬೆಂಗಳೂರು, ದಿನಾಂಕ: 4ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ನಾಗಮ್ಮ ಮಹಿಳಾ ಪೇದೆ 1469 ಬೀದರ್ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 863

**ವಿಷಯ:** ಶ್ರೀ ಹೆಚ್.ಗಂಗಾಧರಾಚಾರಿ, ಎಹೆಚ್‌ಸಿ 33,ಸಿಎಆರ್ (ಕೇಂದ್ರ), ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ಸಿಎಆರ್ (ಕೇಂದ್ರ) ಬೆಂಗಳೂರು ಇವರ ಆದೇಶ ಸಂಖ್ಯೆ:ಡಿ/ಇ/03/2002-03, ಆಪು ಸಂಖ್ಯೆ:01/2003-04 ದಿನಾಂಕ:29-04-2003/09-05-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:41/ಅಪೀಲು/2003. ಓಬಿಸಂ 824/2004 ದಿನಾಂಕ:05-01-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28-04-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/34/ 2004, ದಿನಾಂಕ:31-03-2005.

**ಪ್ರಸ್ತಾವನೆ:**

ಶ್ರೀ ಹೆಚ್. ಗಂಗಾಧರಾಚಾರಿ, AHC 33 ವಾಹನ ವಿಭಾಗ, CAR (ಕೇಂದ್ರ) ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "AHC 33, ಗಂಗಾಧರಾಚಾರಿ, ವಾಹನ ವಿಭಾಗ, CAR (ಕೇಂದ್ರ) ದಿನಾಂಕ:29-03-2002ರಂದು ಸಂಜೆ 5-00 ಗಂಟೆಯಲ್ಲಿ ಪ್ರಧಾನ ಕಚೇರಿಯ ದ್ವಿತೀಯ ದರ್ಜೆ ಸಹಾಯಕ ಶ್ರೀ ನಾಗೇಶ್‌ರಾವ್‌ರವರು ಪೊಲೀಸ್ ಧ್ವಜ ದಿನಾಚರಣೆಯ ಪ್ರಯುಕ್ತ ಪ್ರಚಾರ ಮಾಧ್ಯಮಗಳಿಗೆ ಆಹ್ವಾನ ಪತ್ರಿಕೆಗಳನ್ನು ವಿತರಿಸಲು ನಿಮಗೆ ನೀಡಿದಾಗ, ನೀವು ಅವರಿಗೆ ಸದರಿ ಕರೆಯೋಲೆಗಳನ್ನು ಮುಂಚಿತವಾಗಿ ಕೊಡಬೇಕಾಗಿತ್ತು ಎಂದು ಪ್ರತ್ಯುತ್ತರ ಹೇಳಿದಾಗ, ಶ್ರೀ ಜಯಪ್ರಕಾಶ್ ಪೊಲೀಸ್ ಅಧೀಕ್ಷಕರು ಪಿಆರ್‌ಓ ರವರು ನಿಮಗೆ ಸಮಾಧಾನ ಮಾಡಿ, ಕನಿಷ್ಟ 5 ಆಹ್ವಾನ ಪತ್ರಿಕೆಗಳನ್ನು ವಿತರಿಸಿ ಎಂದಾಗ, ನೀವು ಅವರ ಆದೇಶವನ್ನು ಉಲ್ಲಂಘಿಸಿ, ಅಶಿಸ್ತಿನಿಂದ ಏರುಧ್ವನಿಯಲ್ಲಿ ಏಕವಚನದಲ್ಲಿ ಮಾತನಾಡಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ. ಹಾಗೂ ಸದರಿ ಅಧಿಕಾರಿಯ ವಿರುದ್ದ ಮಾನ್ಯ ಗೃಹ ಸಚಿವರ ಆಪ್ತ ಕಾರ್ಯದರ್ಶಿಗಳ ಬಳಿ ಹೇಳುವುದಾಗಿ ಭಯ ಮಾಡಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ಸಿಎಆರ್ (ಕೇಂದ್ರ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-04-2003/09-05-2003ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ಬಡ್ತಿಗಳಿಗೆ ಧಕ್ಕೆ ಆಗುವಂತೆ 2 ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:05-01-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತಿನ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಶಿಸ್ತನ್ನು ಪಾಲಿಸದೆ ಬೇರೆಯವರ ಎದುರಿಗೆ ಮೇಲಧಿಕಾರಿಗಳೊಂದಿಗೆ ಏಕವಚನದಲ್ಲಿ ಮಾತನಾಡಿರುವುದು ಅರ್ಜಿದಾರರ ಉದ್ಧಟತನ ಆಗಿರುತ್ತದೆ. ಅರ್ಜಿದಾರರು 1978ರಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿದ್ದು, ಎಂದೂ ಯಾವುದೇ ಕಾರಣಕ್ಕೂ ಶಿಕ್ಷೆ ಪಡೆದಿಲ್ಲದಿದ್ದರೂ, ಪ್ರೆಸ್‌ನವರ ಸಮ್ಮುಖದಲ್ಲಿ ಮೇಲಧಿಕಾರಿಗಳೊಂದಿಗೆ ಏರುಧ್ವನಿಯಲ್ಲಿ ಏಕವಚನದಲ್ಲಿ ಮಾತನಾಡಿರುವುದು ಇವರ ಉದ್ದಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 90 ಪೊಸಿಅ 2004, ಬೆಂಗಳೂರು, ದಿನಾಂಕ: 6ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಗಂಗಾಧರಾಚಾರಿ, AHC 33, ಸಿಎಆರ್ (ಕೇಂದ್ರ) ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 862

**ವಿಷಯ:** ಶ್ರೀ ಎಸ್.ಎಸ್. ಸಾವಂತ್, ಪಿ.ಐ. ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)/ 29/ 2002–03 ದಿನಾಂಕ: 26.10.2004 ಮತ್ತು 25.01.2005.
2. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 25.01.2005.

**ಪ್ರಸ್ತಾವನೆ:**

ಶ್ರೀ ಎಸ್.ಎಸ್. ಸಾವಂತ್, ಮಾಜಿ ಪಿ.ಐ. (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸು (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ಮತ್ತು 8ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆಗಳು:**

1. ಆ.ಪೊ.ಅ. ಎಸ್.ಎಸ್.ಸಾವಂತ್, ನೀವು 1995 ರಲ್ಲಿ ಸಿಪಿಐ ಚಡಚಣ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ, 1995ನೇ ಸಾಲಿನ ಡಿಸೆಂಬರ್ ತಿಂಗಳಲ್ಲಿ ಒಂದು ದಿನ ಶ್ರೀ ಶಿವಶಂಕರ ತಿಪ್ಪಣ್ಣಾ ಹತ್ತಿ ಸಾ: ಚಡಚಣ ತಾ: ಇಂಡಿ ಇವರು ತಮ್ಮ ಕೆಲಸದ ನಿಮಿತ್ತ ಶ್ರೀ ಗುಂಡಪ್ಪಾ ಭರಮಪ್ಪಾ ಹಜೇರಿ ಸಾ: ಚಡಚಣ ರವರ ಮನೆಗೆ ಹೋಗಿದ್ದಾಗ, ಅವರ ಮನೆಯಲ್ಲಿ ಇಸ್ಪೇಟ ಆಟ ನಡೆಯುತ್ತಿದ್ದು, ಆಗ ಸದರಿಯವರ ಮನೆಯಲ್ಲಿ ಪೊಲೀಸ್ ದಾಳಿ ನಡೆದಿದ್ದು, ಇಸ್ಪೇಟ ಆಡುವರೊಂದಿಗೆ ಶ್ರೀ ಶಿವಶಂಕರ ತಿಪ್ಪಣ್ಣ ಹತ್ತಿಯವರನ್ನು ಸಹ ವಿನಾಕಾರಣ ಠಾಣೆಗೆ ನೀವು ತೆಗೆದುಕೊಂಡು ಹೋಗಿದ್ದು, ಇರುತ್ತದೆ.

ನಂತರ ನೀವು ಅವರನ್ನು ಸದರಿ ಕೇಸಿನಲ್ಲಿ ಹಾಕಿರುವುದನ್ನು ಬಿಡುವುದಕ್ಕೋಸ್ಕರ ಅವರಿಂದ 1,000–00 ರೂ.ಗಳ ಅಕ್ರಮ ಸಂಭಾವನೆಯನ್ನು ಕೇಳಿ ಪಡೆದುಕೊಂಡು ನಂತರ ಅವರ ಮೇಲೆ ವಿನಾಕಾರಣ ಕೇಸ್ ಸಹಾ ಹಾಕಿದ್ದು, ಈ ರೀತಿ ಬೆದರಿಸಿ ಅವರಿಂದ ಅಕ್ರಮ ಸಂಭಾವನೆ ಕೇಳಿ ಪಡೆದುಕೊಂಡಿರುತ್ತೀರಿ. ಈ ರೀತಿ ನೀವು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

2. ಆ.ಪೊ.ಅ. ಎಸ್.ಎಸ್.ಸಾವಂತ್, ನೀವು 1996 ರಲ್ಲಿ ಸಿಪಿಐ ಚಡಚಣ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ, ನಾಗರ ಅಮವಾಸೆ ಸಮಯದಲ್ಲಿ ಶ್ರೀ ಲಕ್ಷ್ಮಣ ಶರಣಪ್ಪಾ ಯಮದೆ, ಸಾ:ಉಮರಾಣಿ ಈತನ ಅಣ್ಣನ ಮಗನಾದ ಅಂಬಾಜಪ್ಪಾ ಯಮದೆ, ಈತನ ಕೊಲೆ ಪ್ರಕರಣದಲ್ಲಿ ಲಕ್ಷ್ಮಣ ಶರಣಪ್ಪಾ ಯಮದೆ, ಅಡಿವೆಪ್ಪಾ, ಸಿದ್ದಣ್ಣ, ಅರ್ಜುನ ಮತ್ತು ರಾಮ ಶರಣಪ್ಪಾ ಯಮದೆ ಎಲ್ಲರೂ ಸಾ: ಉಮರಾಣಿ ರವರನ್ನು, ನೀವು ಚಡಚಣ ಠಾಣೆಗೆ ತಂದು ನಾಲ್ಕೈದು ದಿವಸ ಗೈರ ಕಾಯ್ದೆಶೀರಾಗಿ ಬಂಧನದಲ್ಲಿ ಇಟ್ಟುಕೊಂಡು ನಂತರ ಅವರನ್ನು ಸದರಿ ಕೊಲೆ ಕೇಸಿನಲ್ಲಿ ಹಾಕಿ ಆರೋಪಿತರನ್ನಾಗಿ ಮಾಡುವುದಾಗಿ ಹೇಳಿ ಬೆದರಿಸಿ ಅವರಿಂದ ಅಕ್ರಮ ಸಂಭಾವನೆ ಪಡೆದು ನಂತರ ಅವರನ್ನು ಬಿಡುಗಡೆ ಮಾಡಿರುತ್ತೀರಿ. ಹೀಗೆ ನೀವು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

3. ಆ.ಪೊ.ಅ. ಆದ ನೀವು ಮೇಲ್ಕಂಡ ಅವಧಿಯಲ್ಲಿ ಸಿಪಿಐ ಚಡಚಣ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸಾತಲಗಾಂವ ರಹವಾಸಿಯಾದ ಶ್ರೀ ಸಣ್ಣರವಿ ಹಣಮಂತರಾಯ ಪಾಟೀಲ ಸಾ: ಸಾತಲಗಾಂವ ಈತನ ಸಂಬಂಧಿಯಾದ ಹಣಮಂತರಾಯರ ಅಣ್ಣನ ಕೊಲೆಯಾಗಿದ್ದು, ಆ ಬಗ್ಗೆ ಚಡಚಣದಲ್ಲಿ ಕೇಸ್ ಆಗಿದ್ದು, ಆಗ ಚಡಚಣ ಸಿಪಿಐ ಆಗಿದ್ದ ನೀವು ಸದರಿ ಸಣ್ಣರವಿ ಹಣಮಂತರಾಯ ಪಾಟೀಲರನ್ನು ಈ ಕೇಸಿನಲ್ಲಿ ಠಾಣೆಗೆ ಕರೆಯಿಸಿ ಅವರನ್ನು ಸದರಿ ಕೊಲೆ ಕೇಸಿನಲ್ಲಿ ಆರೋಪಿಯನ್ನಾಗಿ ಮಾಡುವುದಾಗಿ ಹೆದರಿಸಿ ಅವರಿಂದಾ 30,000–00 ರೂಗಳ ಅಕ್ರಮ ಸಂಭಾವನೆಯನ್ನು ಕೇಳಿದ್ದು, ಕಾರಣ ಸಣ್ಣರವಿ ಪಾಟೀಲರು, ಶ್ರೀ ಕಂಟೆಪ್ಪಾ ಚೆನ್ನಪ್ಪಾ ಬಿರಾದರ ಸಾ: ಜಿಗಜಿಣಗಿ ರವರಿಂದ 15,000–00 ರೂಗಳನ್ನು ಕೈಸಾಲವಾಗಿ ಪಡೆದು ನಿಮಗೆ ಕೊಟ್ಟದ್ದು, ಅದನ್ನು ನೀವು ಸ್ವೀಕರಿಸಿದ್ದು, ಇರುತ್ತದೆ. ಈ ರೀತಿ ರವಿ ಪಾಟೀಲರನ್ನು ಠಾಣೆಗೆ ಕರೆಸಿ ಹೆದರಿಸಿ ಅವರಿಂದ ಅಕ್ರಮ ಸಂಭಾವನೆಯನ್ನು ಕೇಳಿ ಪಡೆದು ನೀವು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

4. ಆ.ಪೊ.ಅ. ರವರಾದ ನೀವು ಚಡಚಣ ವೃತ್ತದಲ್ಲಿ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ 1996 ರಲ್ಲಿ ಶ್ರೀ ಕಂಟೆಪ್ಪಾ ಚನ್ನಪ್ಪಾ ಬಿರಾದಾರ ಸಾಜಿಗಜಿಣಗಿ ರವರ ಟೆಂಪೊ ಸಂಖ್ಯೆ:ಕೆಎ–28:4081 ನೇದ್ದು, ಚಡಚಣ ಕ್ರಾಸ್ ಮುಂದುಗಡೆ ಜರಾಂಕಲಿ ಹತ್ತಿರ ಅಪಘಾತವಾಗಿದ್ದು, ಸದರಿ ಕೇಸಿನಲ್ಲಿ ಟೆಂಪೊ ನಂ.ಕೆಎ–28:4081 ನೇದ್ದನ್ನು ಬೇರೆ ಡ್ರಾಯವರನ್ನು ನಡೆಸುತ್ತಿದ್ದರೂ ಸಹ ಅವರ ಮೇಲೆ ಕೇಸು ದಾಖಲಿಸಿಕೊಂಡು ಕ್ರಮ ಜರುಗಿಸದೆ, ಸದರಿ ಟೆಂಪೋದ ಮಾಲೀಕರರಾದ ಶ್ರೀ ಕಂಟೆಪ್ಪಾ ಚನ್ನಪ್ಪಾ ಬಿರಾದಾರ ರವರು ನೀವು ಕೇಳಿದಣಅಕ್ರಮ ಸಂಭಾವನೆಯನ್ನು ಕೊಡದಿದ್ದರಿಂದ, ಸದರಿ ಅಪಘಾತದ ಕೇಸಿನಲ್ಲಿ ಅವರನ್ನು ಅನ್ಯಾಯವಾಗಿ ಅಪರಾಧಿಯನ್ನಾಗಿ ಮಾಡಿ ಕೋರ್ಟಿಗೆ ಕಳುಹಿಸಿದ್ದು, ಹೀಗೆ ಅವರ ಮೇಲೆ ಸುಳ್ಳು ಅಪರಾಧ ಹೊರಿಸಿ ಕೇಸಿನಲ್ಲಿ ಹಾಕಿ ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ತೀವ್ರ ಕರ್ತವ್ಯಚ್ಯುತಿಯನ್ನು ಎಸಗಿರುತ್ತೀರಿ.

5. ಆ.ಪೊ.ಅ. ಎಸ್.ಎಸ್.ಸಾವಂತ್, ಸಿಪಿಐ ಆದ ನೀವು 1996 ರಲ್ಲಿ ಸಿಪಿಐ ಚಡಚಣ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ ಜನವರಿ ತಿಂಗಳಲ್ಲಿ ಶ್ರೀ ಬಾಬುರಾವ ಸಂಗಪ್ಪಾ ಬಿರಾದಾರ ಸಾ: ಝಳಕಿ ರವರ ಟ್ರ್ಯಾಕ್ಟರನಲ್ಲಿದ್ದ ಬಾಗೇವಾಡಿ ಶಾಂತಿಲಾಲ್ ಸೇಟ್ ರವರು ಕೊಟ್ಟಿದ್ದ ಜಲಟೆನ್‌ಗಳನ್ನು ನೋಡಿ, ಲೈಸನ್ಸ್ ಇಲ್ಲವೆಂದು ಅವರನ್ನು ಠಾಣೆಗೆ ಕರೆದುಕೊಂಡು ಹೋಗಿ ಏಳು ದಿವಸಗಳ ವರೆಗೆ ಅವರನ್ನು ಠಾಣೆಯಲ್ಲಿ ಬಂಧನದಲ್ಲಿಟ್ಟು, ನಂತರ ಒಂದು ಲಕ್ಷ ಅಕ್ರಮ ದುಡ್ಡು ಕೇಳಿ ಅವರು ಕೊಡಲು ನಿರಾಕರಿಸಿದಾಗ, ಮಾಲೀಕರಾದ ಬಾಗೇವಾಡಿಯ ಶಾಂತಿಲಾಲ್ ಸೇಟ್‌ರನ್ನು ಕರೆಯಿಸಿ ಅವರ ಮದ್ದಿನ ದಾಖಲಾತಿ ದಫ್ತರಗಳನ್ನು ತರಿಸಿ ಅವರನ್ನು ಬೆದರಿಸಿ ಅವರಿಂದ ಎರಡು ಲಕ್ಷ ರೂ ಅಕ್ರಮ ಸಂಭಾವನೆ ಕೇಳಿದ್ದು, ಅವರೂ ಸಹ ಕೊಡದೆ ಇದ್ದಾಗ ಆ ಬಗ್ಗೆ ಕೇಸ್ ಮಾಡಿದ್ದು, ಇರುತ್ತದೆ.

ನಂತರ ಇದೇ ಕೇಸಿನಲ್ಲಿ ಅವರ ಕನ್ನೂರ ಗೋಡಾವನನಲ್ಲಿರುವ ರೂ.10 ಲಕ್ಷ ಮೌಲ್ಯದ ಮಾಲೀನ ಸಮೇತ ಗೋಡಾನನ್ನು ಸೀಜ್ ಮಾಡಿ ಪೊಲೀಸರನ್ನು ಕಾವಲು ಇಟ್ಟಾಗ್ಯೂ ಗೋಡಾವನನಲ್ಲಿರುವ ಮಾಲು ಕಳುವಾಯಿತು ಆಗ ಸದರಿ ಗೋಡಾವನದ ಮಾಲೀಕರಾದ ಶ್ರೀ ಶಾಂತಿಲಾಲ್ ಸೇಟ್ ರವರು ನಿಮ್ಮ ಮೇಲೆ ಕೇಸ್ ಮಾಡಿಸುತ್ತೇನೆ ಎಂದು ನಿಮಗೆ ಹೇಳಿದಾಗ ನೀವು ಮದ್ದಿನ ದಾಖಲಾತಿ ದಫ್ತಗಳನ್ನು ಅವರಿಗೆ ಹಿಂತಿರುಗಿಸಿಕೊಟ್ಟು ನೀವು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

6. ಆ.ಪೊ.ಅ. ಎಸ್.ಎಸ್.ಸಾವಂತ್, ಸಿಪಿಐ ಅದ ನೀವು ಚಡಚಣ ವೃತ್ತದಲ್ಲಿ ಸಿಪಿಐ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ 1996 ರಲ್ಲಿ ಚಡಚಣ ಠಾಣಾ ಹದ್ದಿಯಲ್ಲಿ ಬರುವ ಬರಡೋಲ ಗ್ರಾಮದ ರಹವಾಸಿ ಶ್ರೀ ಚಂದ್ರಶೇಖರ ಸಿದ್ದಪ್ಪಾ ನಾಗೇನವರ ಇವರ ವಿವಾಹಿತ ಮಗಳಾದ ಸುನಂದಾಳು ಪಂಚಮಿ ಹಬ್ಬಕ್ಕೆ ಬಂದಾಗ ಸದರಿ ಗ್ರಾಮದ ಅಪ್ಪಾಸಾಬ ದ್ಯಾವಪ್ಪಾ ಪಾಟೀಲ, ಇವನು ಅವಳನ್ನು ಅಪಹರಿಸಿಕೊಂಡು ಹೋಗಿ ಊರು ಮುಂದಿನ ತೋಟದಲ್ಲಿ ಇಟ್ಟಿದ್ದು, ಆ ಕುರಿತು ಅದೇ ಗ್ರಾಮದ ಶ್ರೀ ಅರವಿಂದ ಜಗದೇವ ಕಟ್ಟಿಮನಿ ಹಾಗೂ ಸದರಿ ಸುನಂದಳ ತಂದೆ ಮತ್ತು ತಾಯಿಯವರು ನಿಮಗೆ ದೂರು ಕೊಡಲು ಬಂದಾಗ ಅವರ ದೂರನ್ನು ತೆಗೆದುಕೊಂಡು ರೀತಿ ಪ್ರಕಾರ ಕ್ರಮ ಜರುಗಿಸುವ ಬದಲಾಗಿ, ಅವರಿಗೆ ನೀವು ಅವಾಚ್ಯ ಶಬ್ದಗಳಿಂದ ಮಾತನಾಡಿ ಅಪಮಾನ ಪಡಿಸಿ,

ದೂರು ತೆಗೆದುಕೊಳ್ಳುವುದನ್ನು ನಿರಾಕರಿಸಿರುತ್ತೀರಿ. ನಂತರ ಸದರಿ ಅಪ್ಪಾಸಾಹೇಬ ದ್ಯಾವಪ್ಪಾ ಪಾಟೀಲನನ್ನು ಠಾಣೆಗೆ ಕರಿಸಿ ಅವರ ಮೇಲೆ ಯಾವುದೇ ಕ್ರಮ ಜರುಗಿಸದೆ ಅವರಿಂದ ಅಕ್ರಮ ಸಂಭಾವನೆಯನ್ನು ಕೇಳಿ ಪಡೆದು, ಅವರನ್ನು ಬಿಟ್ಟು ಅತೀವ ದುರ್ನಡತೆಯನ್ನು ಪ್ರದರ್ಶಿಸಿ ಘೋರ ಕರ್ತವ್ಯ ಚ್ಯುತಿಯನ್ನು ಎಸಗಿರುತ್ತೀರಿ.

7. ಆ.ಪೊ.ಅ. ಎಸ್.ಎಸ್.ಸಾವಂತ್, ಸಿಪಿಐ ಆದ ನೀವು 1996 ರಲ್ಲಿ ಸಿಪಿಐ ಚಡಚಣ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸೆಪ್ಟೆಂಬರ್ ತಿಂಗಳಲ್ಲಿ ಶ್ರೀ ಸಿದ್ದಪ್ಪಾ ಗಂಗಪ್ಪಾ ಮುಂದೋಡಗಿ (ಲೈನ್‌ಮನ್) ಇವರನ್ನು ಠಾಣೆಗೆ ಕರೆದುಕೊಂಡು ಬಂದು ಅವರ ಗುಡಿಯವರಿಂದ ಹಣ ತಿಂದು, ಗೈರುಕಾಯ್ದೆಶಿರಾಗಿ ಗುಡಿಗೆ ಕರೆಂಟು ಹಾಕಿಕೊಟ್ಟಿದ್ದಾರೆಂದು, ಸದರಿಯವರ ಮೇಲೆ ಸುಳ್ಳು ಕೇಸನ್ನು ಹಾಕಿ ಅವರಿಗೆ ವಿನಾಕಾರಣ ತೊಂದರೆ ಕೊಟ್ಟು ದುರ್ನಡತೆಯನ್ನು ಪ್ರದರ್ಶಿಸಿ, ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

8. ಆ.ಪೊ.ಅ. ಎಸ್.ಎಸ್.ಸಾವಂತ್, ಸಿಪಿಐ ಆದ ನೀವು ಸಿಪಿಐ ಚಡಚಣ ವೃತ್ತದಲ್ಲಿ ಸಿಪಿಐ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ 1996 ನೇ ನವೆಂಬರ್ ತಿಂಗಳಲ್ಲಿ ಝಳಕಿ ಗ್ರಾಮದಲ್ಲಿ ನಡೆಯುತ್ತಿರುವ ದೌರ್ಜನ್ಯ ಮತ್ತು ಕಳುವುಗಳ ಬಗ್ಗೆ ಸಾರ್ವಜನಿಕರಿಂದ ದೂರು ಬಂದಿದ್ದು, ಆ ಬಗ್ಗೆ ನೀವು ಯಾವುದೇ ಕ್ರಮ ತೆಗೆದುಕೊಳ್ಳದೆ ಇದ್ದಾಗ ಝಳಕಿ ಗ್ರಾಮದ ಗ್ರಾಮ ಪಂಚಾಯಿತಿ ಚೇರ್‌ಮನ್ನರವರಾದ ಶ್ರೀ ಶ್ರೀಮಂತ ರೇವಪ್ಪಾ ಕಾಪಸೆ ರವರು ನಿಮ್ಮ ಅಫೀಸಿಗೆ ಬಂದು ಸ್ವತಃ ಭೇಟಿಯಾಗಿ ಝಳಕಿಯಲ್ಲಿ ನಡೆಯುತ್ತಿರುವ ಕಾನೂನು ಬಾಹಿರ ಕೃತ್ಯಗಳ ಸಂಬಂಧ ಸೂಕ್ತ ಕ್ರಮ ತೆಗೆದುಕೊಳ್ಳಲು ವಿನಂತಿಸಿ ಕೇಳಿಕೊಂಡಾಗ, ನೀವು ಅದಕ್ಕೆ ಕಿವಿಗೊಡದೆ ಅವರಿಗೆ ಸಿಕ್ಕಾಪಟ್ಟೆ ರೇಗಾಡಿ ಅಪಮಾನ ಮಾಡಿದ್ದು, ಇರುತ್ತದೆ. ಅವರಿಗಾದ ಅಪಮಾನಕ್ಕೆ ಸಾರ್ವಜನಿಕರು, ನಿಮ್ಮ ವಿರುದ್ಧ ಧಿಕ್ಕಾರ ಕೂಗುತ್ತಾ ನಿಮ್ಮ ಮೇಲೆ ಕ್ರಮ ಕೈಕೊಳ್ಳಲು ಚಳುವಳಿ ಮಾಡಿದ್ದು, ಇರುತ್ತದೆ. ಈ ರೀತಿ ನೀವು ಸಾರ್ವಜನಿಕರ ಸಮಸ್ಯೆಗಳಿಗೆ ಸ್ಪಂದಿಸದೆ ಅವರೊಂದಿಗೆ ಅಸಭ್ಯವಾಗಿ ವರ್ತಿಸಿ ಇಲಾಖೆಯ ಘನತೆಗೆ ಕುಂದು ತಂದು, ದುರ್ನಡತೆ ಪ್ರದರ್ಶಿಸಿ, ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯ ಚ್ಯುತಿ ಎಸಗಿರುತ್ತೀರಿ.

9. ಆ.ಪೊ.ಅ. ಎಸ್.ಎಸ್.ಸಾವಂತ್, ಸಿಪಿಐ ನೀವು ಚಡಚಣ ವೃತ್ತದಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, 1995 ರಲ್ಲಿ ಚಡಚಣ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿರುವ ಎಸ್.ಎಂ.ಪಾಟೀಲ, ಪೊಲೀಸ್ ಪೇದೆ ರವರನ್ನು ಅಥಣಿ ಹತ್ತಿರ ಇರುವ ಐನಾಪುರ ಗ್ರಾಮದ ಬಳಿ ಇರುವ ನಿಮ್ಮ ಸಂಬಂಧಿಕರ ಹೆಸರಿನಲ್ಲಿರುವ ಜಮೀನಿನಲ್ಲಿ (ತೋಟದಲ್ಲಿ) ಮತ್ತು ಅದರಲ್ಲಿಯ ಕಬ್ಬಿನ ಬೆಳೆ ವಗ್ಗೈರೆ ಉಸ್ತುವಾರಿ ನೋಡಿಕೊಳ್ಳಲು ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸದರಿ ಪಿಸಿಯನ್ನು ಸುಳ್ಳು ದಾಖಲಾತಿಗಳನ್ನು ನಿರ್ಮಿಸುವ ವ್ಯವಸ್ಥೆ ಮಾಡಿ ಅದರಡಿಯಲ್ಲಿ ಬೆಕಾಯ್ದೇಶಿರಾಗಿ ಅವರನ್ನು ಸುಮಾರು ಒಂದು ವರ್ಷಗಳವರೆಗೆ ಇಟ್ಟು ಅವರಿಂದ ನಿಮಗೆ ಸಂಬಂಧಿಸಿದ ಖಾಸಗಿ ಕೆಲಸವನ್ನು ಮಾಡಿಸಿಕೊಂಡು ನಿಮ್ಮ ಅಧಿಕಾರದ ದುರುಪಯೋಗ ಮಾಡಿಕೊಂಡು ತೀವ್ರ ದುರ್ನಡತೆಯನ್ನು ಪ್ರದರ್ಶಿಸಿ ಘೋರ ಕರ್ತವ್ಯ ಚ್ಯುತಿಯನ್ನು ಎಸಗಿರುತ್ತೀರಿ.

10. ಆ.ಪೊ.ಅ. ಎಸ್.ಎಸ್.ಸಾವಂತ್, ನೀವು ಚಡಚಣ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ, ಚಡಚಣ ಠಾಣೆಯ ಪಿಸಿ ಶ್ರೀ ರಿಯಾಜ ಅಹ್ಮದ್ ತಂದೆ ಬುರಾನಸಾಬ್ ಕೂಡಗಿ ಇವರ ಕಡೆಯಿಂದ ಒಂದು ಚಿಕ್ಕ ಸೂಟಕೇಸಿನ ತುಂಬಾ ಹಣವನ್ನು ಹಾಗೂ ಒಂದು ಚೀಟಿಯನ್ನು ಕೊಟ್ಟು ಬೆಳಗಾವಿಯಲ್ಲಿರುವ ನಿಮ್ಮ ತಂದೆಯವರಿಗೆ ಕೊಟ್ಟು ಬರಲು ಹೇಳಿ ಕಳಿಸಿದಂತೆ ಸದರಿ ಕೂಡಗಿಯವರು ನಿಮ್ಮ ತಂದೆಯವರಿಗೆ ಸದರಿ ಹಣ ತಲುಪಿಸಿ ಬಂದಿರುತ್ತಾರೆ. ಇದೆ ಪ್ರಕಾರ ಮತ್ತೊಂದು ಸಲ ಸಹ ಅವರು ನಿಮ್ಮ ತಂದೆಯವರಿಗೆ ಹಣ ತಲುಪಿಸಿ ಬಂದಿರುತ್ತಾರೆ.

ಅದರಂತೆ ಮುಂಬಯಿಯಲ್ಲಿರುವ ನಿಮ್ಮ ಹೆಂಡತಿಯ ತಂದೆಯವರಿಗೂ ಸಹ ಒಂದು ಸೂಟಕೇಸಿನಲ್ಲಿ ಹಣವನ್ನು ಶ್ರೀ ರಿಯಾಜ ಅಹ್ಮದ್ ಕೂಡಗಿ ಚಡಚಣ ಪೊಲೀಸ್ ಠಾಣೆಯ ಪಿಸಿ ರವರಿಂದ ಕೊಟ್ಟು ಕಳಿಸಿದನ್ನು ಚಡಚಣದಿಂದ ಮುಂಬಯಿ ದಾದರಿಗೆ ಹೋಗಿ ದಾದರನಲ್ಲಿರುವ ಒಂದು ಹೋಟೆಲ್ ಹತ್ತಿರ ಇಳಿದು ನಿಂತಾಗ ನಿಮ್ಮ ಮಾವನವರು ಅಲ್ಲಿ ಬಂದಿದ್ದು, ಅವರಿಗೆ ಸದರಿ ಹಣದ ಸೂಟಕೇಸನ್ನು ಕೊಟ್ಟು, ಕೊಟ್ಟಂತಹ ಬಸ್‌ಚಾರ್ಜ್ ಹಣ ತೆಗೆದುಕೊಂಡು ಬಸ್ಸಿನಿಂದ ಠಾಣೆಗೆ ವಾಪಸ ಬಂದಿದ್ದು, ಈ ಪ್ರಕಾರ ಪೊಲೀಸ್ ಇಲಾಖೆಯಲ್ಲಿ ಸರ್ಕಾರಿ ಸೇವೆ ಸಲ್ಲಿಸುತ್ತಿರುವ ಶ್ರೀ ಆರ್.ಬಿ. ಕೂಡಗಿ, ಪಿಸಿ ರವರನ್ನು ನಿಮ್ಮ ಸ್ವಂತ ಕೆಲಸಕ್ಕೆ ಸೃಷ್ಟಿಸಿದ ಸುಳ್ಳು ದಾಖಲಾತಿಗಳಡಿಯಲ್ಲಿ ಬೆಕಾಯ್ದೆಶಿರಾಗಿ ಉಪಯೋಗಿಸಿಕೊಂಡು ನೀವು ನಿಮ್ಮ ಅಧಿಕಾರದ ದುರುಪಯೋಗಪಡಿಸಿಕೊಂಡು ದುರ್ನಡತೆಯನ್ನು ಪ್ರದರ್ಶಿಸಿ ಘೋರ ಕರ್ತವ್ಯಚ್ಯತಿಯನ್ನು ಎಸಗಿರುತ್ತೀರಿ.

11. ಆ.ಪೊ.ಅ. ಎಸ್.ಎಸ್.ಸಾವಂತ್, ನೀವು ಚಡಚಣ ವೃತ್ತ ನಿರೀಕ್ಷಕರೆಂದು ಅಂತಾ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ:29/09/1996 ರಂದು ನಿಂಬರಗಿ ಕ್ರಾಸನಲ್ಲಿ ಪಿ.ಕೆ.ಲೋಣಿಯ ಗಾಣಿಗೇರ ಶಿವಪ್ಪಾ ಜುಲ್ಪಿ ಎಂಬ ಯುವಕನ ಕೊಲೆಯಾಗಿದ್ದು, ಮೃತ ದೇಹವನ್ನು ಎಂ.ಜಿ.ಪಾಟೀಲರವರು ತಿಳಿಸಿದ್ದಾಗ, ಎಎಸ್‌ಐ ಶ್ರೀ ಎಂ.ಜಿ.ಗುಬಚಿ ರವರಿಗೆ ಈ ಬಗ್ಗೆ "ಸದರಿ ಶಿವಪ್ಪಾ ಜುಲ್ಪಿ ಇವನು ಸಿಡಲು ಬಡಿದು ಸತ್ತಿದ್ದಾನೆ ಅಂತ ಪ್ರಕರಣ ದಾಖಲಿಸಿಕೊಂಡು ಕ್ರಮ ಜರುಗಿಸಿರಿ" ಅಂತಾ ಆ.ಪೊ.ಅ. (ನೀವು) ಅವರಿಗೆ ಹೇಳಿರುತ್ತೀರಿ ಅಂತಾ ಎಎಸ್‌ಐ ಶ್ರೀ ಎಂ.ಜಿ.ಗುಬಜಿ ರವರು ಶ್ರೀ ಎಂ.ಬಿ.ಪಾಟೀಲರಿಗೆ ತಿಳಿಸಿದರು. ಆಗ ಇದು ಸಿಡಿಲು ಬಡಿದು ಸಾವಲ್ಲಾ ಕೊಲೆ ಪ್ರಕರಣ ಇದೆ ಅಂತಾ ಸದರಿಯವರು ಎಎಸ್‌ಐ ಶ್ರೀ ಎಂ.ಪಿ.ಗುಬಚಿ ರವರಿಗೆ ಹೇಳಿದರು. ನಂತರ ಆ ಬಗ್ಗೆ ಅಶ್ಚರ್ಯಚಕಿತರಾದ ಎಂ.ಬಿ.ಪಾಟೀಲ ಇವರು ಮೆ: ಎಸ್.ಪಿ., ಬಿಜಾಪೂರ ರವರನ್ನು ಸಂಪರ್ಕಿಸಿ ವಿಷಯ ತಿಳಿಸಿದಾಗ ಸದರಿ ಬಗ್ಗೆ ವಿಮರ್ಶಿಯಾಗಿ ನಂತರ ಕೊಲೆ ಪ್ರಕರಣ ದಾಖಲಾಗಿದ್ದು, ಸಿಪಿಐ ನಿಂದಾಗಿ ಶ್ರೀ ಬಿ.ಆರ್.ಹಿರೇಗೌಡರ ಇವರಿಂದ ತಪಾಸಣೆಯಾಗಿ ಚಾರ್ಜ್‌ಸೀಟ್ ಸಲ್ಲಿಸಿದ್ದು, ಇರುತ್ತದೆ. ಈ ಬಗ್ಗೆ ಚಡಚಣ ಠಾಣೆಯಲ್ಲಿ ಎಸ್‌ಎಚ್‌ಡಿ ದಿನಾಂಕ:29/09/1996 ಮತ್ತು 30/09/1996 ರಲ್ಲಿ ನಮೂದಾದ ಬರವಣಿಗೆಗಳಲ್ಲಿ ಸಕ್ರಮ ಇಲ್ಲದ್ದು ಸಹ ಕಂಡು ಬರುತ್ತದೆ. ಹೀಗೆ ನೀವು ಸದರಿ ಪ್ರಕರಣದಲ್ಲಿ ಘೋರ ಅಪರಾಧವನ್ನು ಮುಚ್ಚಿಹಾಕುವ ಹಾಗೂ ತಾಬಡತೊಬಡ ಗುನ್ನೆ ದಾಖಲಾಗದಂತಹ ಕ್ರಿಯೆಯನ್ನು ಮಾಡಿ ದುರ್ನಡತೆಯನ್ನು ಪ್ರದರ್ಶಿಸಿ ಕರ್ತವ್ಯದಲ್ಲಿ ಘೋರ ಕರ್ತವ್ಯಚ್ಯುತಿಯನ್ನು ಎಸಗಿರುತ್ತೀರಿ.

12. ಆ.ಪೊ.ಅ. ನೀವು ಚಡಚಣ ವೃತ್ತದಲ್ಲಿ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ, 1996 ನೇ ಸಾಲಿನಲ್ಲಿ ಬಳ್ಳಾರಿಯ ಕಂಟ್ರಾಕ್ಟರ್ ಮುತ್ಯಾಲು ರೆಡ್ಡಿಯವರು ಝಳಕಿ ಹತ್ತಿರ ಕಾಲುವೆಯ ಕಂಟ್ರಾಕ್ಟರ್ ಕೆಲಸ ಮಾಡುತ್ತಿದ್ದಾಗ ಬ್ಲಾಸ್ಟಿಂಗ್ ಮಾಡಿದಾಗ ಸುಮಾರು ಮನೆಗಳು ಬಿದ್ದು ಲುಕಸಾನು ಆಗಿದ್ದು, ಈ ಸಂಬಂಧ ನೀವು ಸದರಿ ಕಂಟ್ರಾಕ್ಟರ್ ರವರಾದ ಶ್ರೀ ಬಿ.ಮುತ್ಯಾಲು ರೆಡ್ಡಿ ರವರನ್ನು ಕರೆಯಿಸಿ ವಿಚಾರ ಮಾಡಿ ಅವರನ್ನು ಹೆದರಿಸಿ ಅವರಿಂದ ಸುಮಾರು 15,00,000–00 ರೂಗಳ ಅಕ್ರಮ ಸಂಭಾವನೆಯನ್ನು ಕೇಳಿ ಪಡೆದು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

13. ಆ.ಪೊ.ಅ. ಎಸ್.ಎಸ್.ಸಾವಂತ್ ನೀವು ಚಡಚಣ ವೃತ್ತದಲ್ಲಿ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 29/09/1996 ರ 15–20 ದಿವಸಗಳ ಹಿಂದೆ ಚಡಚಣ ಠಾಣೆಯಲ್ಲಿ ಪಿಎಸ್‌ಐ ಅಂತಾ ಕೆಲಸ ಮಾಡುತ್ತಿದ್ದಾಗ ಶ್ರೀ ಬಿ.ಆರ್.ಪಾಟೀಲ,

ಪಿಎಸ್‌ಐ ಚಡಚಣ ಇವರಿಗೆ ನೀವು ದಿನನಿತ್ಯ ತೀರಾ ಹಿಂಸೆ ಮಾಡಿ ಒಂದು ದಿನಾ ನೀವು ಕೋಪೋದ್ರಿಕ್ತರಾಗಿ ಕಾಲಿನಿಂದ ಒದ್ದ ಪರಿಣಾಮ ಅವರು ಗೋಡೆಗೆ ಅಪ್ಪಳಿಸಿ ಕೆಳಕ್ಕೆ ಬಿದ್ದು, ತಲೆಗೆ ಪೆಟ್ಟು ಹತ್ತಿದ್ದು, ಮುಂದೆ ಅವರನ್ನು ಮಿರಜ ಆಸ್ಪತ್ರೆಯಲ್ಲಿ ಸುಶ್ರೂಷೆಯಲ್ಲಿದ್ದಾಗ, ಸದರಿ ಗಾಯದ ಪರಿಣಾಮವಾಗಿ ಸದರಿ ಪಿಎಸ್‌ಐ ರವರು ಮರಣ ಹೊಂದಿದ್ದು, ನೀವು ಘೋರ ದುರ್ನಡತೆಯನ್ನು ಪ್ರದರ್ಶಿಸಿ ಘೋರ ಅಪರಾಧವನ್ನು ಎಸಗಿರುತ್ತೀರಿ.

14. ಆ.ಪೊ.ಅ. ಎಸ್.ಎಸ್.ಸಾವಂತ್, ನೀವು ಚಡಚಣ ವೃತ್ತದಲ್ಲಿ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ, 1995 ನೇ ಸಾಲಿನಲ್ಲಿ ಮರಗೂರ ಸೌದಾಗರ ರವರ ಪೈಕ್ತಿ ಒಬ್ಬ ಹಾಜಿ ಸೈಫನ ಜಾತಗಾರ ಅನ್ನುವ ಮುದುಕನು ಹೊಳೆಗೆ ಬಿದ್ದು ಸತ್ತಿದ್ದು, ಇರುತ್ತದೆ. ಆಗ ನೀವು ಸದರಿ ಮರಗೂರ ಸೌದಾಗರನನ್ನು ಠಾಣೆಗೆ ಕರೆಸಿ ಇದು ಕೊಲೆ ನೀವು ಕೊಲೆ ಮಾಡಿರುವಿ ಎಂದು ಬೆದರಿಸಿ ಸೌದಾಗರ ರವರಿಂದ 80,000-00 ರೂಗಳ ಅಕ್ರಮ ಸಂಭಾವನೆಯನ್ನು ಕೇಳಿ ಪಡೆದು ನೀವು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ ಎಸಗಿರುತ್ತೀರಿ.

15. ಆ.ಪೊ.ಅ. ಎಸ್.ಎಸ್.ಸಾವಂತ್ ಸಿಪಿಐ ನೀವು ಚಡಚಣ ವೃತ್ತದಲ್ಲಿ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ, ನಿಮ್ಮ ದೌರ್ಜನ್ಯ ಅನ್ಯಾಯ ಮತ್ತು ಲಂಚಗುಳಿತನಕ್ಕೆ ಬೇಸತ್ತು, ಶ್ರೀ ಮಲ್ಲನಗೌಡ ಪಾಟೀಲ ಹಾಗೂ ಠಾಣೆಯ ಸಿಬ್ಬಂದಿಯವರು ಕೂಡ ಬಿಜಾಪುರಕ್ಕೆ ಹೋಗಿ ನಿಮ್ಮ ವಿರುದ್ಧ ಹ್ಯಾಂಡ್‌ಬಿಲ್ಲನ್ನು ಪ್ರಿಂಟ್ ಮಾಡಿಸಿ, ಅದರಲ್ಲಿ ದಿನಾಂಕ:14/11/1996 ರಂದು ನಿಮ್ಮನ್ನು ಖಂಡಿಸಿ ಠಾಣೆಯ ಮುಂದೆ, ನಿಮ್ಮ ವಿರುದ್ಧ ಉಪವಾಸ ಸತ್ಯಾಗ್ರಹ ಕೊಡುವುದಾಗಿ ನಿರ್ಧರಿಸಿ ನಮೂದಿಸಲಾಗಿತ್ತು.

ಆಗ ನೀವು ಸದರಿ ಉಪವಾಸ ಸತ್ಯಾಗ್ರಹವನ್ನು ನಿಲ್ಲಿಸುವುದಕ್ಕೋಸ್ಕರ ಸತ್ಯಾಗ್ರಹದ ಮುಖಂಡರಾದ ಶ್ರೀ ಮಲ್ಲನಗೌಡ ಪಾಟೀಲ ರವರ ಮನವರಿಸಲು ಅವರಿಗೆ ಅಕ್ರಮವಾಗಿ ಮೂರು ಲಕ್ಷ ರೂ ಕೊಡಲು ಹೋದಾಗ ಅವರು ಒಪ್ಪದಿದ್ದಾಗ, ಇನ್ನೊಂದು ಲಕ್ಷ ಕೊಡುವುದಾಗಿ ಮನವರಿಸಿದ್ದು, ಅದಕ್ಕೂ ಸಹ ಅವರು ಒಪ್ಪದಿದ್ದಾಗ ಸದರಿ ಮಲ್ಲನಗೌಡ ಪಾಟೀಲರನ್ನು ಶಿರಗೂರಿನ ಶ್ರೀ ಬಿ.ಜಿ.ಪಾಟೀಲರ ತೋಟಕ್ಕೆ ತರಿಸಿಕೊಡು ಹಾಕಿಸಿ ದಿನಾಂಕ:13/11/1996 ರಂದು ರಾತ್ರಿ 8 ಗಂಟೆ ಸುಮಾರಿಗೆ ನೀವು ಅಲ್ಲಿ ಹೋಗಿ ಎಂ.ಬಿ.ಪಾಟೀಲರನ್ನು ಹೆದರಿಸಿ ಮೊದಲೇ ಬರೆದಿದ್ದ ಒಂದು ಪತ್ರದಲ್ಲಿ ಅವರ ಸಹಿಯನ್ನು ಬಲವಂತವಾಗಿ ತೆಗೆದುಕೊಂಡು ಅವರನ್ನು ಬಿಟ್ಟು ಬಿಟ್ಟಿರುತ್ತೀರಿ.

ಈ ರೀತಿ ಬಲವಂತವಾಗಿ ಪಡೆದುಕೊಂಡ ಸದರಿ ಎಂ.ಬಿ.ಪಾಟೀಲರ ದಾಖಲಾತಿಯನ್ನು ಪತ್ರಿಕಾ ಹೇಳಿಕೆಯಂದು ಮರುದಿನ ದಿನಪತ್ರಿಕೆಯಲ್ಲಿ ಉಪವಾಸ "ಸತ್ಯಾಗ್ರಹ ನಿಲ್ಲಿಸಿದ್ದಾರೆ" ಎಂದು ಪೇಪರಿನಲ್ಲಿ ಹಾಕಿಸಿದ್ದು, ಇರುತ್ತದೆ. ಈ ರೀತಿ ನೀವು ನಿಮ್ಮ ವಿರುದ್ಧ ದುರ್ನಡತೆಯುಳ್ಳ ಬಿತ್ತಿ ಪತ್ರಿಕೆಗಳನ್ನು ಹೊರಡಿಸುವುದಕ್ಕೆ ಹಾಗೂ ಬಲವಂತವಾಗಿ ಸಹಿ ಪಡೆದದಕ್ಕೆ ಕಾರಣರಾಗಿ ಪೊಲೀಸ್ ಇಲಾಖೆಯ ಉನ್ನತ ಸ್ಥಾನದ ಘನತೆಗೆ ಕಳಂಕ ತಂದು ಘೋರ ದುರ್ನಡತೆಯನ್ನು ಪ್ರದರ್ಶಿಸಿ ತೀವ್ರ ಕರ್ತವ್ಯ ಚ್ಯುತಿಯನ್ನು ಎಸಗಿರುತ್ತೀರಿ.

16. ಆ.ಪೊ.ಅ. ರವರಾದ ನೀವು ಅಥಣಿ ತಾಲ್ಲೂಕಿನಲ್ಲಿ ವೃತ್ತ ನಿರೀಕ್ಷಕರೆಂದು ಕರ್ತವ್ಯ ನಿರ್ವಹಿಸುತ್ತಿದ್ದಾಗ 1994 ರಲ್ಲಿ ಶ್ರೀ ಸದಾಶಿವ ಬಣಚೋಡ ಸಾ: ಮೂಳೆಗ್ರಾಮ ತಾ: ಅಥಣಿ ಇವರ ಐನಾಪೂರ ಹತ್ತಿರ ಇರುವ ಸರ್ವೆ ನಂ.665 37:02 ಎಕರೆ ಜಮೀನನ್ನು ಖರೀದಿ ಮಾಡುವ ಕುರಿತು 25,00,000-00 ಕ್ಕೆ ಖರೀದಿಸುವುದಕ್ಕಾಗಿ ನೀವೆ ಸ್ವತಃ ಮಾತನಾಡಿ 1,00,000-00 ರೂ. ಅಡ್ವಾನ್ಸ್ ಕೊಟ್ಟು ನಿಮ್ಮ ತಾಯಿಯವರ ಹೆಸರಿನಲ್ಲಿ ಆಗ್ರಿಮೆಂಟ್ ಮಾಡಿಕೊಂಡು ಒಂದು ವರ್ಷದೊಳಗೆ ಉಳಿದೆಲ್ಲಾ ಹಣವನ್ನು ಅವರಿಗೆ ಕೊಟ್ಟು ಖರೀದಿ ಮಾಡಿಕೊಳ್ಳುವುದಾಗಿ ವ್ಯವಹಾರಿಸಿದ್ದು, ಆದರೆ ಅ ರೀತಿ ಕಾಲಾವಧಿಯಲ್ಲಿ ಖರೀದಿ ಮಾಡಿಕೊಳ್ಳದೆ ದಿನಾಂಕ:08/09/1994 ರಂದು ರೂ.3,00,000-00 ಕೊಟ್ಟು ಭೂಮಿಯನ್ನು ಸದರಿ ಸದಾಶಿವ ಬಣಚೋಡ ಇವರ ಹೆಸರಿನಲ್ಲಿಯೇ ಇರಲಿ ಸರ್ಕಾರಿ ನೌಕರನಾದ ನಾನು ಇಷ್ಟು ಮೊತ್ತಕ್ಕೆ ಭೂಮಿಯನ್ನು ಕೊಳ್ಳುವಂತಿಲ್ಲ ಎಂದು ಅವರಿಗೆ ಹೇಳಿ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಸಾಗು ಮಾಡುತ್ತಾ ನಿಮ್ಮ ಅಧೀನದಲ್ಲಿ ಕೆಲಸ ಮಾಡುವ ಪೊಲೀಸರನ್ನು ಸದರಿ ಭೂಮಿಯನ್ನು ಉಸ್ತುವಾರಿಗೆ ಉಪಯೋಗಿಸಿ, ನಂತರ ದಿನಾಂಕ:03/10/94 ರಂದು 4,00,000-00 ದಿನಾಂಕ:08/04/95 ರಂದು 2,00,000-00 ಹಾಗೂ ನಂತರ 1,50,000-00 ಹಾಗೂ ದಿನಾಂಕ:01/01/1996 ರಂದು 5,00,000-00 ಈ ರೀತಿ ಒಟ್ಟು 16,50,000-00 ಹಣ ಮಾತ್ರ ಕೊಟ್ಟು ಕೊನೆಗೆ ಉಳಿದ ಹಣ ಕೊಡದೆ ಇದ್ದಿದ್ದರಿಂದ ಭಾರಿ ನಷ್ಟವನ್ನು ಅನುಭವಿಸಿದ ಸದರಿ ಸದಾಶಿವ ಬಣಚೋಡ ರವರು ನೊಂದುಕೊಂಡು ನೀವು ಮಾಡಿದ ಅನ್ಯಾಯ ಹಾಗೂ ಮೋಸದ ಜಾಲಕ್ಕೆ ಒಳಗಾಗಿ ದಿನಾಂಕ:10/04/2002 ರಂದು ಎದೆ ಒಡೆದುಕೊಂಡು ಮರಣ ಹೊಂದಿದ್ದು ಇರುತ್ತದೆ.

ಅಲ್ಲದೆ ಸದರಿ ಸದಾಶಿವ ಬಣಚೋಡ ರವರ ಕುಟುಂಬದವರಿಗೆ ಆಗಾಗ ಗುಂಡಾಗಳಿಂದ ಹೆದರಿಸಿ ದೌರ್ಜನ್ಯ ಮಾಡಿಸಿ ಮತ್ತು ಪ್ರಾಣ ಬೆದರಿಕೆ ಹಾಕಿ ಶ್ರೀ ಸದಾಶಿವ ಬಣಚೋಡ ರವರಿಗೆ ಮೋಸ ಮಾಡಿರುವುದಲ್ಲದೆ. ಅವರ ಸಾವಿಗೆ ಕಾರಣರಾಗಿ ನೀವು ಅಧಿಕಾರ ದುರುಪಯೋಗಪಡಿಸಿಕೊಂಡು ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಘೋರ ಕರ್ತವ್ಯಚ್ಯುತಿಯನ್ನು ಎಸಗಿರುತ್ತೀರಿ.

17. ಆ.ಪೊ.ಅ. ಎಸ್.ಎಸ್.ಸಾವಂತ್, ಸಿಪಿಐ ಚಡಚಣ ಆದ ನೀವು ದಿ:ಮಹಾಲಕ್ಷ್ಮಿ ಅರ್ಬನ್ ಕೋ.ಆಫ್ ಬ್ಯಾಂಕ್ ಲಿ, ಬಿಜಾಪೂರ ಮೆಂಬರಾಗಿ ದಿನಾಂಕ:21/10/1995 ರಂದು ಸದರಿ ಬ್ಯಾಂಕಿನಿಂದ ಸಾಲ ಪಡೆದಿದ್ದು, ಅದು ನೀವು ಕಾನೂನು ಬದ್ದವಾದ ಕಾರ್ಯ ನಿರ್ವಹಣೆಯನ್ನು ಮಾಡುವುದರಲ್ಲಿ ನಿಮ್ಮ ಮೇಲೆ ಅನುಚಿತ ಪ್ರೇರಣೆ:ಹಣಕಾಸಿನ ಉಪಕಾರದಂತಹ ಹಂಗಿನಂತಹ ದುಷ್ಪರಿಣಾಮ ಬಿರುವುದಂತಾಗಿದ್ದು, ಆ ಬಗ್ಗೆ ಸರ್ಕಾರದಿಂದ:ಸಂಬಂಧಪಟ್ಟ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯದೆ 75,000-00 ರೂಗಳ ಸಾಲವನ್ನು ಪಡೆದು ಮರುಪಾವತಿ ಮಾಡಿ ರೂಲ್ 21, ಕರ್ನಾಟಕ ಸಿವಿಲ್ ಸರ್ವಿಸ್ (ಕಾಂಡೆಕ್ಟ್ ರೂಲ್ಸ್) 1966 ನೇದ್ದನ್ನು ಉಲ್ಲಂಘಿಸಿ ದುರ್ನಡತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ, ಬೆಂಗಳೂರು ಇವರು ಮೇಲೆ ಉಲ್ಲೇಖ 1ರಲ್ಲಿ ಓದಲಾದ ದಿನಾಂಕ: 26.10.2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಉಲ್ಲೇಖ (2)ರಲ್ಲಿ ಶ್ರೀ ಎಸ್.ಎಸ್. ಸಾವಂತ್, ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿ ತಮಗೆ ಅನ್ಯಾಯವಾಗಿದ್ದು, ನ್ಯಾಯ ದೊರಕಿಸಿಕೊಡುವಂತೆ ಕೋರಿರುತ್ತಾರೆ. ಅರ್ಜಿದಾರರ ವಾಸ್ತವಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಹಾಗೂ ಕಂಡಿಕೆವಾರು ಷರಾಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳು ಹಾಗೂ ದಾಸ್ತಾವೇಜುಗಳ ಆಧಾರದ ಮೇಲೆ ಸಾಬೀತಾದುದರ ಮೇರೆಗೆ ಶಿಕ್ಷೆಯನ್ನು ವಿಧಿಸಿದ್ದು ಸರಿ ಇರುತ್ತದೆ. ಮುಂದುವರೆದು ಪೊಲೀಸ್

ಇಲಾಖೆಯು ಒಂದು ಶಿಸ್ತಿನ ಇಲಾಖೆಯಾಗಿದ್ದು, ಶ್ರೀ ಎಸ್.ಎಸ್. ಸಾವಂತ್ ಇವರು ಎಸಗಿರುವ ಆರೋಪಗಳು ಅತಿ ಘೋರ ಮತ್ತು ಗಂಭೀರವಾಗಿರುತ್ತವೆ. ಅಲ್ಲದೆ, ಇವರು ಶಿಸ್ತು ಪ್ರಾಧಿಕಾರಿಗಳಾದ ಡಿಜಿ ಮತ್ತು ಐಜಿಪಿರವರು ಅಭಿಪ್ರಾಯ ಪಟ್ಟಿರುವಂತೆ ಪೊಲೀಸ್ ಇಲಾಖೆಯ ಘನತೆಗೆ ಕಳಂಕ ತಂದಿರುತ್ತಾರೆ. ಶ್ರೀ ಎಸ್.ಎಸ್. ಸಾವಂತ್ ರವರ ಮೇಲ್ಮನವಿಯನ್ನು ಯಾವುದೇ ಸಮರ್ಥನೆ ಇರುವುದಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 44 ಪೊಸಿಪ 2005, ಬೆಂಗಳೂರು, ದಿನಾಂಕ: 15ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸು (ಶಿಸ್ತು ನಡವಳಿ) ನಿಯಮಾವಳಿ 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎಸ್. ಸಾವಂತ್, ಮಾಜಿ ಪಿ.ಐ. ಬೆಳಗಾಂವ ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 870

**ವಿಷಯ:** ಶ್ರೀ ಶಿವಕುಮಾರ್, ಮಾಜಿ ಪಿಸಿ, 2526, ಸಿಎಆರ್ (ಕೇಂದ್ರ), ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಮನವಿಯ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ನಗರ ಸಶಸ್ತ್ರ ಮೀಸಲು ಪಡೆ ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/102/91-92. ಆಪು ಸಂಖ್ಯೆ:38/94-95. ದಿನಾಂಕ:21-06-1994.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:42/ಅಪೀಲು/2000-01.ದಿನಾಂಕ:02-05-2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20-07-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/45/2004:ದಿನಾಂಕ:24-01-2005.

**ಪ್ರಸ್ತಾವನೆ:**

ಶ್ರೀ ಶಿವಕುಮಾರ, ಮಾಜಿ ಪಿಸಿ 2526 ಸಿಎಆರ್ ಕೇಂದ್ರ, ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** "Gross misconduct in that you pc 2526 shivakumar of `A` coy has illtreated and harassed your wife & Rolling inmoral relationship with another lady."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಶಸ್ತ್ರ ಮೀಸಲು ಪಡೆ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:21/23-06-1994ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಹಾಗೂ ಶಿಸ್ತು ಪ್ರಾಧಿಕಾರಿಯ ಆದೇಶದ 6 ವರ್ಷಗಳ ನಂತರ ಮೇಲ್ಮನವಿ ಸಲ್ಲಿಸಿದ್ದು, ವಿಳಂಬಕ್ಕೆ ಯಾವುದೇ ಕಾರಣ ಸಹ ನೀಡಿಲ್ಲವೆಂದು, ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:02-05-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಮೊದಲನೇ ಪತ್ನಿಗೆ ಕಿರುಕುಳ ನೀಡಿದ್ದು, ಹಾಗೂ ಮತ್ತೊಬ್ಬ ಮಹಿಳೆಯೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿ ರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಈ ರೀತಿಯ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಶಿಸ್ತಿನ ಇಲಾಖೆಗೆ ವಿರುದ್ಧವಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 120 ಪೊಸಿಅ 2004, ಬೆಂಗಳೂರು, ದಿನಾಂಕ:10ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಕುಮಾರ, ಮಾಜಿ ಪಿಸಿ 2526 ಸಿಎಆರ್ (ಕೇಂದ್ರ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 909

**ವಿಷಯ:** ಶ್ರೀ ಹೆಚ್.ಹುಚ್ಚಯ್ಯ, ಎಎಸ್‌ಐ, ರೈಲ್ವೆ ಪೊಲೀಸ್ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ರೈಲ್ವೆಸ್, ಬೆಂಗಳೂರು ಇವರ ಆದೇಶ ಸಂಖ್ಯೆ:ಶಿಕ್ಷೆ/69/ 2003-04. ದಿನಾಂಕ:29-03-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರು, ರೈಲ್ವೆಸ್, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ಮೆ/02/ 2004. ದಿನಾಂಕ:30-07-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12-10-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/64/ 2004. ದಿನಾಂಕ:31-01-2005.

**ಪ್ರಸ್ತಾವನೆ:**

ಶ್ರೀ ಹೆಚ್. ಹುಚ್ಚಯ್ಯ, ASI ಬೆಂಗಳೂರು ಗ್ರಾಮಾಂತರ ರೈಲ್ವೆ ಪೊಲೀಸ್ ಠಾಣೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:** "ಶ್ರೀ ಹುಚ್ಚಯ್ಯ ASI ಬೆಂಗಳೂರು ಗ್ರಾಮಾಂತರ ರೈಲ್ವೆ ಪೊಲೀಸ್ ಠಾಣೆ ಇವರು, ಈ ಹಿಂದೆ ಮಂಗಳೂರು ರೈಲ್ವೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ, ಅಧಿಕೃತವಾಗಿ ಸಲ್ಲಿಸಲಾದ ಪರಸ್ಪರ ವರ್ಗಾವಣೆಯ ಅರ್ಜಿಯ ಮೇರೆಗೆ, ಇವರನ್ನು ಬೆಂಗಳೂರು ಗ್ರಾಮಾಂತರ ರೈಲ್ವೆ ಪೊಲೀಸ್ ಠಾಣೆಗೂ ಮತ್ತು ಶ್ರೀ ಮೋಹನ್‌ಸಿಂಗ್ ರವರನ್ನು ಮಂಗಳೂರು ರೈಲ್ವೆ ಪೊಲೀಸ್ ಠಾಣೆಗೂ ವಿನಂತಿಯ ಮೇರೆಗೆ ವರ್ಗಾವಣೆಗೊಂಡಿದ್ದು, ಇದು ನ್ಯಾಯಸಮ್ಮತವಾಗಿದ್ದರೂ ಅವರ ಸಹಿಯನ್ನು ಶ್ರೀ ಮೋಹನ್‌ಸಿಂಗ್ ಮತ್ತು ಠಾಣಾ ಬರಹಗಾರರಾದ RPC ಸಂಖ್ಯೆ:508 ಮತ್ತು 189 ರವರುಗಳು ಖೋಟಾ ಸಹಿ ಮಾಡಿರುವುದಾಗಿ ಆರೋಪಿಸಿ, ಮಾನ್ಯ ಡಿಐಜಿಪಿ ರೈಲ್ವೇಸ್ ಬೆಂಗಳೂರು ಇವರಿಗೆ ದಿನಾಂಕ:06-06-2003ರಂದು ಸುಳ್ಳು ಅರ್ಜಿಯನ್ನು ಸಲ್ಲಿಸುವುದರೊಂದಿಗೆ ಕರ್ತವ್ಯದಲ್ಲಿ ಅತೀವ ದುರ್ನಡತೆ, ಅಶಿಸ್ತು, ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದರ ಮೇಲೆ ಆರೋಪ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ನೀಡಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ರೈಲ್ವೇಸ್ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-03-2004ರ ಆದೇಶದಲ್ಲಿ ಅರ್ಜಿದಾರರಿಗೆ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ 6 (ಆರು) ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರು ರೈಲ್ವೇಸ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:30-07-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇತರ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾವು ಕನ್ನಡದಲ್ಲಿ ಸಹಿ ಮಾಡೇ ಇಲ್ಲವೆಂದು ಹೇಳಿದ್ದು, ಯುಡಿಆರ್ ದಾಖಲಾತಿಗಳಲ್ಲಿ ಕನ್ನಡದಲ್ಲಿ ಸಹಿ ಮಾಡಿರುವುದು ಕಂಡುಬರುತ್ತಿದ್ದು, ಸುಳ್ಳು ಆರೋಪ ಹೊರಿಸುತ್ತಾ ಅತೀವ ದುರ್ನಡತೆ, ಅಶಿಸ್ತು ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡುಬರುತ್ತಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 213 ಪೊಸಿಅ 2004, ಬೆಂಗಳೂರು, ದಿನಾಂಕ:10ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಹುಚ್ಚಯ್ಯ ASI ರೈಲ್ವೆ ಪೊಲೀಸ್, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 914

**ವಿಷಯ:** ಶ್ರೀ ಬಿ.ಎಚ್.ಹೊಂಗಲ್, ಮಾಜಿ ಸಿಪಿಸಿ ಬೆಳಗಾವಿ ಜಿಲ್ಲೆರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ:ಪಿಯುಎಸ್/6/ 96.ದಿನಾಂಕ:27-09-1996. ಆಪು ಸಂಖ್ಯೆ:992/96.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು/ಉವ/39/96-97, ದಿನಾಂಕ:17-09-1997.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-10-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/98/ 2002-03. ದಿನಾಂಕ:16-07-2003.

5. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:1072/1998ರ ಆದೇಶ ದಿನಾಂಕ:19-04-2002.
6. ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:30629/2002ರ ಆದೇಶ ದಿನಾಂಕ:03-09-2002.

**ಪ್ರಸ್ತಾವನೆ:**

ಶ್ರೀ ಬಿ.ಹೆಚ್.ಹೊಂಗಲ್ ಮಾಜಿ ಸಿಪಿಸಿ 2042 ಬೆಳಗಾವಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**" 1. ನೀವು ಶಿಸ್ತಿನ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದು, ನಿಮಗೆ ಮೊದಲನೆಯ ಹೆಂಡತಿ ಕಮಲಾ ಅಲಿಯಾಸ ಸುವರ್ಣ ಇವಳು ಜೀವಂತ ಇದ್ದು ಅವಳ ಮತ್ತು ಮೇಲಧಿಕಾರಿಗಳ ಅನುಮತಿ ಪಡೆಯದೇ ಮಹಾದೇವಿ ಬನ್ನಿಶೆಟ್ಟಿ ಇವಳಿಗೆ ಕಾನೂನು ಬಾಹಿರವಾಗಿ ಎರಡನೆಯ ಲಗ್ನವಾಗಿದ್ದು ಇರುತ್ತದೆ.

2. ನೀವು ಎರಡನೆಯ ಲಗ್ನವಾಗುವ ಉದ್ದೇಶದಿಂದ ನಿಮ್ಮ ಮೊದಲೆಯ ಹೆಂಡತಿ ಕಮಲಾ ಅಲಿಯಾಸ ಸುವರ್ಣ ಇವಳಿಗೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಹಿಂಸೆ ನೀಡಿದ್ದು, ಈ ಬಗ್ಗೆ ನಿಮ್ಮ ಮೇಲೆ ಬೆಳಗಾವಿ ಕ್ಯಾಂಪ ಪೊಲೀಸ್ ಠಾಣೆಯಲ್ಲಿ ಗುನ್ನಾ ನಂ.16:96 ಕಲಂ 498 (ಎ) ಐಪಿಸಿ ನೇದ್ದು ದಾಖಲಾಗಿದೆ."

ಮೇಲ್ಕಂಡ ಆರೋಪಗಳ ಮೇಲೆ ಇಲಾಖಾ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯಲ್ಲಿ ಆರೋಪಗಳು, ಸಾಬೀತಾಗಿದೆ ಎಂದು ನೀಡಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಬೆಳಗಾಂ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:27-09-1996ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದು ಹಾಕಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಮೇಲ್ಮನವಿಯಲ್ಲಿ ಅರ್ಜಿದಾರರು ಮಂಡಿಸಿರುವ ಅಂಶಗಳಾವುವು ಸಮಂಜಸ ಆಗಿರುವುದಿಲ್ಲವೆಂದು ಪರಿಗಣಿಸುತ್ತಾ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆಯು ಸಮಂಜಸವಾಗಿದ್ದರೂ, ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ಶಿಕ್ಷಾದೇಶವನ್ನು ಮಾರ್ಪಡಿಸಿ, ಅರ್ಜಿದಾರರಿಗೆ ಸೇವೆಯಿಂದ ತೆಗೆದು ಹಾಕಿದ ಶಿಕ್ಷೆಗೆ ಬದಲಾಗಿ, ಅವರಿಗೆ `ಕಡ್ಡಾಯ ನಿವೃತ್ತಿ` ಶಿಕ್ಷೆಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:17-09-1997ರ ಆದೇಶದಲ್ಲಿ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಹಾಗೂ ರಾಜ್ಯ ಉಚ್ಚ ನ್ಯಾಯ ಮಂಡಳದಲ್ಲೂ ಅರ್ಜಿಗಳನ್ನು ಸಲ್ಲಿಸಿದ್ದು, ಎರಡರಲ್ಲೂ ಆರೋಪಿತರ ಅರ್ಜಿಗಳನ್ನು ತಿರಸ್ಕರಿಸಲಾಗಿದೆ. ಅರ್ಜಿದಾರರು ತಮ್ಮ ಮೊದಲನೇ ಹೆಂಡತಿ ಜೀವಂತ ಇರುವಾಗಲೇ ಬೇರೊಬ್ಬ ಹೆಣ್ಣನ್ನು ಮದುವೆ ಆಗಿರುವುದು ಕೆ.ಸಿ.ಎಸ್. (ನಡತೆ) ನಿಯಮ ಗಳನ್ವಯ ಅಪರಾಧವಾಗಿದ್ದು, ಇದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರ ಇವರನ್ನು ಸೇವೆಯಿಂದ ವಜಾ ಮಾಡಿದ್ದರು, ಆದರೆ, ಮೇಲ್ಮನವಿ ಪ್ರಾಧಿಕಾರಿಗಳು ಇವರ ಸೇವೆಯನ್ನು ಪರಿಗಣಿಸಿ, ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಅರ್ಜಿದಾರರು ಮೇಲ್ಮನವಿ ಪ್ರಾಧಿಕಾರಿಯ ಆದೇಶದ ವಿರುದ್ದ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲೂ ಅರ್ಜಿಗಳನ್ನು ಸಲ್ಲಿಸಿದ್ದು, ಆ ಅರ್ಜಿಗಳು ವಜಾ ಆಗಿರುವುದರಿಂದ, ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಸೇವೆಯಲ್ಲಿ ಪುನರ್ ನೇಮಕ ಮಾಡಲು ಸಾಧ್ಯವಿರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 266 ಪೊಸಿಅ 2002, ಬೆಂಗಳೂರು, ದಿನಾಂಕ:18ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಹೆಚ್.ಹೊಂಗಲ್, ಮಾಜಿ ಸಿಪಿಸಿ 2042 ಬೆಳಗಾವಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 916

**ವಿಷಯ:** ಶ್ರೀ ಸಿದ್ದಲಿಂಗಯ್ಯ, ಮಾಜಿ ಪಿ.ಸಿ.6537, ಅಶೋಕ ನಗರ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:ಡಿಇ/06/ಆರ್6/ ಇತರೆ 2000.ದಿನಾಂಕ:25-02-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು ಮತ್ತು ಸಿಎಆರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:9/ಅಪೀಲು/2002-03.ದಿನಾಂಕ:29-07-2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06-11-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/77/ 2002-03.ದಿನಾಂಕ:10-04-2003.

**ಪ್ರಸ್ತಾವನೆ:**

ಶ್ರೀ ಸಿದ್ದಲಿಂಗಯ್ಯ, ಪಿಸಿ, 6537, ಅಶೋಕನಗರ ಪೊಲೀಸ್ ಠಾಣೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "ಶ್ರೀ ಸಿದ್ದಲಿಂಗಯ್ಯ, ಪಿಸಿ, 6537, ಅಶೋಕನಗರ ಪೊಲೀಸ್ ಠಾಣೆ ಆದ ನೀವು ದಿನಾಂಕ:17-08-2000 ರಿಂದ ಅನಧಿಕೃತವಾಗಿ ಗೈರುಹಾಜರಾಗಿದ್ದು, ಗೈರುಹಾಜರಾಗುವ ಮುನ್ನ ಠಾಣೆಗೆ ಮಾಹಿತಿ ನೀಡದೇ, ಮೇಲಾಧಿಕಾರಿಗಳಿಗೆ ತಿಳಿಸದೆ ಹಾಗೂ ಅನುಮತಿ ಪಡೆಯದೆ ಏಕಾಏಕಿ ಗೈರುಹಾಜರಾಗಿದ್ದು, ದಿನಾಂಕ:13-09-2000 ರಂದು ಗೈರುಹಾಜರಿ ಸೂಚನಾ ಪತ್ರ ಹೊರಡಿಸಿ ಕರ್ತವ್ಯಕ್ಕೆ ಹಾಜರಾಗಬೇಕೆಂದು ಸೂಚಿಸಿದ್ದು, ದಿನಾಂಕ:05-10-2000ರಂದು ಸೂಚನಾ ಪತ್ರ ಪಡೆದ ನೀವು ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ಅನಧಿಕೃತ ಗೈರುಹಾಜರಿಯಲ್ಲಿ ಮುಂದುವರಿದು ಪೊಲೀಸ್ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿರುವ ನೀವು ಬೇಜವಾಬ್ದಾರಿಯಿಂದ ಮತ್ತು ಅಸಡ್ಡೆಯಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ನಿಮ್ಮ ಕರ್ತವ್ಯ ನಿರ್ಲಕ್ಷತೆ ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ಕೇಂದ್ರ ವಿಭಾಗ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:25/02/2002ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಠಾಣೆ ಆಡಳಿತ ಮತ್ತು ಸಿಆರ್ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:29-07-2002. ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರರ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 1981ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಅನೇಕ ಬಾರಿ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿದ್ದು, ಸಂಬಳ ರಹಿತ ರಜೆ ಶಿಕ್ಷೆ ನೀಡಿದ್ದರೂ, ತಮ್ಮ ಕರ್ತವ್ಯ ಪ್ರಜ್ಞೆ ಬೆಳೆಸಿಕೊಳ್ಳದೆ ಗೈರುಹಾಜರಾಗುವ ಪ್ರವೃತ್ತಿಯನ್ನು ಮಾಡಿಕೊಂಡಿರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ಇವರು ಪದೇ ಪದೇ ಗೈರುಹಾಜರಾಗುವ ಪ್ರವೃತ್ತಿ ಬೆಳೆಸಿಕೊಂಡಿರುವ ಕಾರಣ, ಶಿಸ್ತು ಇಲಾಖೆಗೆ ಅರ್ಹರಲ್ಲವೆಂದು ಪರಿಗಣಿಸಿ ಸೇವೆಯಿಂದ ತೆಗೆದುಹಾಕಿದ ದಂಡನೆ ವಿಧಿಸಿದ್ದು, ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 262 ಪೊಸಿಅ 2002, ಬೆಂಗಳೂರು, ದಿನಾಂಕ:17ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಆರ್.ಸಿದ್ದಲಿಂಗಯ್ಯ, ಮಾಜಿ ಪಿಸಿ 6537, ಅಶೋಕ ನಗರ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 912

**ವಿಷಯ:** ಶ್ರೀ ಮರಿಯಪ್ಪ, ಹೆಚ್‌ಸಿ.1452, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ ಬೆಂಗಳೂರು ನಗರ. ಇವರ ಆದೇಶ ಸಂಖ್ಯೆ:12/ಡಿಇ/ಆರ್-6 ಡಿಸಿಪಿ/ಉ/99-2001. ದಿನಾಂಕ:13-02-2001.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಬೆಂಗಳೂರು ಇವರ ಆದೇಶ ಸಂಖ್ಯೆ:53/ಅಪೀಲು/2000-01. ದಿನಾಂಕ:31-10-2001.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:11-08-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/77/ 2003-04. ದಿನಾಂಕ:01-06-2004.

**ಪ್ರಸ್ತಾವನೆ:**

ಶ್ರೀ ಮರಿಯಪ್ಪ, ಹೆಚ್‌ಸಿ 1452 ಬೆಂಗಳೂರು ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** " ನೀವುಗಳು ಮಹಾಲಕ್ಷ್ಮಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮ ಠಾಣೆಯ ಮೊ.ಸಂಖ್ಯೆ:406/93 ಕಲಂ 498 (ಎ)ಐಪಿಸಿ ಕುರಿತು ಕೇಸು ದಾಖಲಾಗಿದ್ದು, 7ನೇ ACMM ಮಾನ್ಯ ನ್ಯಾಯಾಲಯವು ಈ ಮೊಕದ್ದಮೆಯನ್ನು CC ಸಂಖ್ಯೆ:17170/93ರಲ್ಲಿ ದಾಖಲಿಸಿಕೊಂಡು ಫಿರ್ಯಾದಿ ಸಾಕ್ಷಿ-1, ಶ್ರೀಮತಿ ಯಶೋಧಮ್ಮ ರವರಿಗೆ ದಿನಾಂಕ:16-09-1995 ರಂದು ನ್ಯಾಯಾಲಯಕ್ಕೆ ಹಾಜರು ಮಾಡಲು ಸಮನ್ಸ್ ನೀಡಿರುತ್ತೆ, ಹಾಗೂ ದಿನಾಂಕ:18-07-1995 ರಿಂದ 29-07-1997ರ ದಿನಾಂಕಗಳಿಗೆ ಸಂಬಂಧಿಸಿದಂತೆ, ಕಾಲಾವಕಾಶಗಳನ್ನು ನೀಡಿ, ಸಾಕ್ಷಿ-1 ರಿಂದ 8 ರವರನ್ನು ಹಾಜರು ಮಾಡಲು ಸಮನ್ಸ್‌ಗಳನ್ನು ವಿವಿಧ ದಿನಾಂಕಗಳಲ್ಲಿ ಗೌರವಾನ್ವಿತ ನ್ಯಾಯಾಲಯವು ನೀಡಿದ್ದು, ಈ ಸಮನ್ಸ್‌ಗಳನ್ನು ಜಾರಿ ಮಾಡಿ ನ್ಯಾಯಾಲಯಕ್ಕೆ ಹಾಜರು ಪಡಿಸಲು ಠಾಣೆಯ ಪಿಎಸ್ಐ ರವರು ನಿಮ್ಮಗಳನ್ನು ನೇಮಿಸಿದ್ದು, ನೀವುಗಳು ಈ

ಸಮನ್ಸ್‌ಗಳನ್ನು ಯಾವುದನ್ನೂ ಜಾರಿ ಮಾಡಿರುವುದಿಲ್ಲ, ವಿಳಾಸ ಪತ್ತೆಯಾಗಿಲ್ಲ, ಮನೆ ಖಾಲಿ ಮಾಡಿದ್ದಾರೆ, ಎಂದು ಕೆಲವು ಬಾರಿ ಮಾತ್ರ ಪಿಎಸ್‌ಐ ರವರ ಗಮನಕ್ಕೆ ತಂದಿದ್ದು, ನಂತರ ಅನೇಕ ಬಾರಿ ಮನ ಬಂದಂತೆ ಅಸಂಭದ್ದ ಷರಾ ಬರೆದು ಅವುಗಳನ್ನು ಅಧಿಕಾರಿಗಳ ಗಮನಕ್ಕೆ ತಾರದೇ ನೇರವಾಗಿ ನ್ಯಾಯಾಲಯಕ್ಕೆ ಸಮನ್ಸ್‌ನ್ನು ವಾಪಸ್ಸು ಮಾಡಿರುತ್ತೀರಿ. ಫಿರ್ಯಾದಿಗಳ ವಿಳಾಸವನ್ನು ಪತ್ತೆ ಹಚ್ಚಲು ಯಾವುದೇ ಪ್ರಾಮಾಣಿಕ ಪ್ರಯತ್ನವನ್ನು ನೀವುಗಳು ಮಾಡಿರುವುದಿಲ್ಲ. ಮಾನ್ಯ ನ್ಯಾಯಾಲಯವು ಫಿರ್ಯಾದಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಲು ಸಾಕಷ್ಟು ಕಾಲಾವಕಾಶಗಳನ್ನು ನೀಡಿದ್ದರೂ ಸಹ, ಸಮನ್ಸ್ ಜಾರಿ ಮಾಡಲು ಯಾವುದೇ ಪ್ರಯತ್ನ ಮಾಡದೇ ಮನಸ್ಸಿಗೆ ಬಂದಂತೆ ಷರಾಗಳನ್ನು ಬರೆದು, ಮಾನ್ಯ ನ್ಯಾಯಾಲಯಕ್ಕೆ ನೇರವಾಗಿ ಸಲ್ಲಿಸಿರುವುದನ್ನು ಗಮನಿಸಿದರೆ, ಆರೋಪಿಯೊಂದಿಗೆ ಷಾಮೀಲಾಗಿ, ಮೊಕದ್ದಮೆ ಖುಲಾಸೆಯಲ್ಲಿ ಪರ್ಯಾವಸನಗೊಳ್ಳಲು ಕಾರಣಾರಾಗಿರುತ್ತೀರಿ. ಇದು ನೀವು ಕರ್ತವ್ಯದ ಲ್ಲಿ ತೋರಿಸಿದ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿಯಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:13-02-2001ರ ಆದೇಶದಲ್ಲಿ ಅರ್ಜಿದಾರರನ್ನು ಮುಖ್ಯ ಪೇದೆ ಹುದ್ದೆಯಿಂದ ಪೊಲೀಸ್ ಪೇದೆ ಹುದ್ದೆಗೆ ಹಿಂಬಡ್ತಿ ನೀಡಿ ಹಿರಿಯ ಪೊಲೀಸ್ ಪೇದೆಯ ಮುನ್ನ ಸೇವಾ ಹಿರಿತನ ಪಡೆಯುವರೆಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯು ಅಸಮ ಪ್ರಮಾಣದ್ದಾಗಿರುವುದರಿಂದ ಅದನ್ನು ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:31-10-2001ರ ಆದೇಶದಲ್ಲಿ ಮೇಲ್ಮನವಿದಾರರ ವಾರ್ಷಿಕ ವೇತನ ಬಡ್ತಿಯನ್ನು ಅದು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ 2 ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡು ಬರುತ್ತದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 169 ಪೊಸಿಅ 2004, ಬೆಂಗಳೂರು, ದಿನಾಂಕ:17ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮರಿಯಪ್ಪ, ಹೆಚ್‌ಸಿ 1452 ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 913

**ವಿಷಯ:** ಶ್ರೀ ನವೀನ್ ಕುಮಾರ್, ಪಿ.ಐ., ಲೋಕಾಯುಕ್ತ ಕಛೇರಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಮನವಿಯ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಕರ್ನಾಟಕ ರಾಜ್ಯ ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/1/07/2003-04. ದಿನಾಂಕ:23-07-2004.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-09-2004.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/55/2004. ದಿನಾಂಕ:31-01-2005.

**ಪ್ರಸ್ತಾವನೆ:**

ಶ್ರೀ ನವೀನ್ ಕುಮಾರ್, ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** "ನವೀನ್ ಕುಮಾರ್, ಪಿಎಸ್‌ಐ ಕೋರಮಂಗಲ, ಹಾಲಿ ಲೋಕಾಯುಕ್ತ, ಬೆಂಗಳೂರು ಇಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿರುವ ಇವರು ದಿನಾಂಕ:16-02-2001ರಂದು ಶ್ರೀ ನರೇಂದ್ರಕುಮಾರ್ ಎಂಬುವವರ ಫಿರ್ಯಾದನ್ನು ಕೋರಮಂಗಲ ಪೊಲೀಸ್ ಠಾಣೆ ಅಪರಾಧ ಸಂಖ್ಯೆ:100/2001, ಕಲಂ 448/504 ಐಪಿಸಿ ಪ್ರಕರಣ ದಾಖಲು ಮಾಡಿಕೊಂಡು ದಿನಾಂಕ:17-02-2001ರಂದು ತನಿಖೆಯನ್ನು ಕೈಗೊಂಡು ಸ್ಥಳದ ಮಹಜರನ್ನು ಮಾಡಿ ಇಬ್ಬರು ಸಾಕ್ಷಿಗಳಾದಂತಹ 1) ಶ್ರೀ ರಾಮ್ ಪ್ರಕಾಶ್ 2) ಸ್ವಪನ್‌ಬಾಗ್‌ರವರುಗಳು ಹೇಳಿಕೆಗಳನ್ನು ಮಾಡಿ ಸಾಕ್ಷಿಗಳ ಹೇಳಿಕೆಯಿಂದ ಸಾಕ್ಷ್ಯಾಧಾರ ಇಲ್ಲವೆಂದು ಕಂಡುಬಂದರೂ ಸಹ, ನ್ಯಾಯಾಲಯಕ್ಕೆ ಅಖೈರು ರಿಪೋರ್ಟ್‌ನ್ನು ಸಲ್ಲಿಸಿದೆ, ಕಡತದಲ್ಲಿಯೇ ಇಟ್ಟು ಪ್ರಭಾರವನ್ನು ವಹಿಸಿಕೊಡದೆ, ಹಾಗೆಯೇ ಇಟ್ಟು, ತಮ್ಮ ಕರ್ತವ್ಯದಲ್ಲಿ ತೀವ್ರಕರ ನಿರ್ಲಕ್ಷತನವನ್ನು ಪ್ರದರ್ಶಿಸಿರುವುದು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ

ನಿರೀಕ್ಷಕರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:23/07/2004ರ ಆದೇಶದಲ್ಲಿ ಅರ್ಜಿದಾರರಿಗೆ ,ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಮೊಕದ್ದಮೆ ಸಂಖ್ಯೆ: 100/01 ಅನ್ನು ದಿನಾಂಕ:16-02-2001ರಂದು ದಾಖಲಿಸಿ, ತನಿಖೆ ಕೈಗೊಂಡು, ಸಾಕ್ಷಿಗಳ ಹೇಳಿಕೆ ಮಾಡಿಕೊಂಡು, ಸಾಕ್ಷ್ಯಾಧಾರಗಳು ಇಲ್ಲವೆಂದು ಕಂಡುಬಂದರೂ, ಅಂತಿಮ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸದೇ, ನಂತರ ವರ್ಗಾವಣೆ ಆದನಂತರ, ಪ್ರಭಾರ ವಹಿಸಿಕೊಡದೆ ಮತ್ತು ಸುಮಾರು ಒಂದು ವರ್ಷದವರೆಗೆ ಪ್ರಗತಿ ತೋರಿಸದೆ ಇರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಅತಿ ಲಘುವಾಗಿದ್ದು, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 190 ಪೊಸಿಅ 2004, ಬೆಂಗಳೂರು, ದಿನಾಂಕ:17ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನವೀನ್ ಕುಮಾರ್ ಪಿಐ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 910

**ವಿಷಯ:** ಶ್ರೀ ಮಲ್ಲಯ್ಯ, ನಿವೃತ್ತ ಎಹೆಚ್‌ಸಿ.6, ಸಿಎಆರ್(ಕೇಂದ್ರ) ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಿಎಆರ್ (ಕೇಂದ್ರ) ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ / 46/99 ಆಪು ಸಂಖ್ಯೆ: 13/2002-03, ದಿನಾಂಕ:23-07-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಕಮಿಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರ ಆದೇಶ,ಸಂಖ್ಯೆ:30/ಅಪೀಲು/2002-03,ಓಬಿಸಂಖ್ಯೆ:623/2002 ದಿನಾಂಕ:31-12-2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28-01-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/109/ 2002-03, ದಿನಾಂಕ:16-07-2003.

**ಪ್ರಸ್ತಾವನೆ:**

ಶ್ರೀ ಮಲ್ಲಯ್ಯ ನಿವೃತ್ತ ಹೆಚ್‌ಸಿ 6, CAR (ಕೇಂದ್ರ) ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "1) ಎಹೆಚ್‌ಸಿ 6, ಮಲ್ಲಯ್ಯ, `ಎ` ವಿಭಾಗ, ಸಿ.ಎ.ಆರ್. (ಕೇಂದ್ರ), ಪಿಸಿ 594, ಅಂಕೇಗೌಡ, 1ನೇ ವಿಭಾಗ ಮತ್ತು ಪಿಸಿ 1843, ವೆಂಕಟರಾಮು,`ಬಿ` ವಿಭಾಗ ಆದ ನಿಮ್ಮನ್ನು ದಿನಾಂಕ:17-03-2000. ರಂದು 3 ಜನ ವಿಚಾರಣಾಧೀನ ಖೈದಿಗಳನ್ನು ಬೆಂಗಳೂರು ಕೇಂದ್ರ ಕಾರಾಗೃಹದಿಂದ ದಾವಣಗೆರೆ ಜಿ.ಎಂ.ಎಫ್.ಸಿ. ನ್ಯಾಯಲಯದಲ್ಲಿ ಹಾಜರುಪಡಿಸಿ, ವಾಪಸ್ಸು ಬೆಂಗಳೂರು ಕೇಂದ್ರ ಕಾರಾಗೃಹಕ್ಕೆ ತಂದು ಬಿಡುವ ಬೆಂಗಾವಲು ಕರ್ತವ್ಯಕ್ಕೆ ನೇಮಿಸಿದ್ದು, ಸದರಿ ನ್ಯಾಯಾಲಯದಲ್ಲಿ 3 ಜನ ಖೈದಿಗಳನ್ನು ಹಾಜರುಪಡಿಸಿ ವಾಪಸ್ಸು ಬೆಂಗಳೂರಿಗೆ ಬಸ್ಸಿನಲ್ಲಿ ಬರುವಾಗ ಚಿತ್ರದುರ್ಗದ ಬಳಿ ದಿನಾಂಕ:18-03-2000 ರಂದು ರಾತ್ರಿ ಸುಮಾರು 11-05 ಗಂಟೆಯಲ್ಲಿ ಈ ಮೂರು ಜನ ವಿಚಾರಣಾಧೀನ ಖೈದಿಗಳ ಪೈಕಿ ಶೀನಾ ಬಿನ್ ರಮೇಶ್ ಎಂಬ ಖೈದಿಯನ್ನು ನಿಮ್ಮಗಳ ಬೆಂಗಾವಲಿನ ಬಂಧನದಿಂದ ತಪ್ಪಿಸಿಕೊಂಡು ಪರಾರಿಯಾ- ಗಲು ಅನುವು ಮಾಡಿ ಕೊಟ್ಟಿದ್ದೀರಿ, ಇದು ನಿಮ್ಮಗಳ ಅಶಿಸ್ತು, ಕರ್ತವ್ಯ ಲೋಪ ಮತ್ತು ದುರ್ನಡತೆಯನ್ನು ಎತ್ತಿ ತೋರಿರುತ್ತೀರಿ."

2) "ಎಹೆಚ್‌ಸಿ 6, ಮಲ್ಲಯ್ಯ, ಎಪಿಸಿ 594, ಅಂಕೇಗೌಡ ಎಪಿಸಿ 1843, ವೆಂಕಟರಾಮು, ಸಿ.ಎ.ಆರ್. (ಕೇಂದ್ರ) ಬೆಂಗಳೂರು ಆದ ನೀವುಗಳು ದಿನಾಂಕ:17-03-2000 ರಂದು 3 ಜನ ವಿಚಾರಣಾ ಖೈದಿಗಳನ್ನು ಬೆಂಗಳೂರು ಕೇಂದ್ರ ಕಾರಾಗೃಹದಿಂದ ಪಡೆದು ದಿನಾಂಕ:18-03-2000ರಂದು ದಾವಣಗೆರೆ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಹಾಜರುಪಡಿಸಿ ವಾಪಸ್ಸು ಬೆಂಗಳೂರಿಗೆ ಬಸ್ಸಿನಲ್ಲಿ ಬರುವಾಗ ಇದೆ ದಿನ (18-03-2000) ರಂದು ರಾತ್ರಿ 3 ಜನ ವಿಚಾರಣಾ ಖೈದಿಗಳ ಪೈಕಿ ಶೀನಾ ಬಿನ್ ರಮೇಶ್ ಎಂಬ ಖೈದಿಗೆ ಸರಿಯಾಗಿ ಕೈಕೋಳವನ್ನು (ಬೇಡಿ) ಹಾಕದೆ ಈ ಖೈದಿ ಇದೇ ದಿನ ರಾತ್ರಿ ಸುಮಾರು 11-05 ಗಂಟೆಯ ಸಮಯದಲ್ಲಿ ಚಿತ್ರದುರ್ಗ ಬಳಿ ಬಸ್ಸಿನಲ್ಲಿ ಬರುವಾಗ ಕೈಗೆ ಹಾಕಿದ್ದ ಬೇಡಿಯನ್ನು ಬಿಚ್ಚಿಕೊಂಡು ಬಸ್ಸಿನಿಂದ ತಪ್ಪಿಸಿಕೊಂಡು ಹೋಗುವವರೆವಿಗೂ ಯಾವುದೇ ಶ್ರಮ ಜರುಗಿಸದೆ ಈ ಖೈದಿಯು ತಪ್ಪಿಸಿಕೊಂಡು ಹೋಗಲು ಬಿಟ್ಟು ಖೈದಿ ಬೆಂಗಾವಲು ಕರ್ತವ್ಯದಲ್ಲಿ ನೀವುಗಳು ಅಜಾಗರೂಕತೆ ಅಸಭ್ಯತನ, ಬೇಜವಾಬ್ದಾರಿ ಮತ್ತು ನಿರ್ಲಕ್ಷ್ಮತೆಯನ್ನು ಎತ್ತಿ ತೋರಿರುತ್ತೀರಿ. ಇದರಿಂದ ಇಲಾಖೆಗೆ ಕೆಟ್ಟ ಹೆಸರು ಬರುವಂತೆ ಮಾಡಿರುತ್ತೀರಿ."

3) "ಎಹೆಚ್‌ಸಿ 6, ಮಲ್ಲಯ್ಯ, `ಎ` ವಿಭಾಗ ಎಪಿಸಿ 594, ಅಂಕೇಗೌಡ, 1ನೇ ವಿಭಾಗ ಎಪಿಸಿ 1843, ವೆಂಕಟರಾಮು, `ಬಿ` ವಿಭಾಗ ಸಿ.ಎ.ಆರ್.(ಕೇಂದ್ರ), ಬೆಂಗಳೂರು ಆದ ನೀವುಗಳು ದಿನಾಂಕ:17-03-2000 ರಂದು 3 ಜನ ವಿಚಾರಣಾ ಖೈದಿಗಳನ್ನು ಬೆಂಗಳೂರು ಕೇಂದ್ರ ಕಾರಾಗೃಹದಿಂದ ದಾವಣಗೆರೆ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹಾಜರುಪಡಿಸಿ ಮತ್ತೆ ಸದರಿ ಖೈದಿಗಳನ್ನು ವಾಪಸ್ಸು ತಂದು ಬೆಂಗಳೂರು ಕೇಂದ್ರ ಕಾರಾಗೃಹಕ್ಕೆ ಬಿಡುವ ಖೈದಿ ಬೆಂಗಾವಲು ಕರ್ತವ್ಯಕ್ಕೆ ಸಿ.ಎ.ಆರ್ (ಕೇಂದ್ರ) ಘಟಕದಿಂದ ನೇಮಿಸಿ ಸದರಿ ಬೆಂಗಾವಲು ಕರ್ತವ್ಯಕ್ಕೆ 1 ರೈಫಲ್, 20 ಮದ್ದು ಗುಂಡುಗಳು, 3 ಸಂಖ್ಯೆ ಕೈಕೋಳ (ಬೇಡಿ) ಹಾಗೂ 1 ಉದ್ದನೆಯ ಸರಪಳಿಯನ್ನು ನೀಡಿ ಖೈದಿ ಬೆಂಗಾವಲು ಕರ್ತವ್ಯದಲ್ಲಿ ಎಚ್ಚರ ವಹಿಸಿ ಕರ್ತವ್ಯನಿರ್ವಹಿಸಲು ಸೂಚಿಸಿ ಬೆಂಗಳೂರು ಕೇಂದ್ರ ಕಾರಾಗೃಹಕ್ಕೆ ಬಿಡುವ ಖೈದಿ ಬೆಂಗಾವಲು ಕರ್ತವ್ಯದಲ್ಲಿ ಎಚ್ಚರಿಕೆ ವಹಿಸಿ ಕರ್ತವ್ಯನಿರ್ವಹಿಸಲು ಸೂಚಿಸಿ ಬೆಂಗಳೂರು ಕೇಂದ್ರ ಕಾರಾಗೃಹದಿಂದ 3 ಜನ ವಿಚಾರಣಾ ಖೈದಿಗಳಾದ (1) ರವಿಕಿರಣ, (2) ನಾಗರಾಜ್ ಮತ್ತು (3) ಶೀನಾ ಬಿನ್ ರಮೇಶ್ ಎಂಬುವವರುಗಳನ್ನು ಪಡೆದು ದಿನಾಂಕ:18-03-2000 ರಂದು ದಾವಣಗೆರೆ ಜೆ .ಎಂ.ಎಫ್.ಸಿ. ನ್ಯಾಯಾಲಯಕ್ಕೆ 3 ಜನ ವಿಚಾರಣಾ ಖೈದಿಗಳನ್ನು ಹಾಜರುಪಡಿಸಿ ಅದೇ ದಿನ (18-03-2000)ರಾತ್ರಿ ದಾವಣಗೆರೆಯಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಬರುವಾಗ, ಈ 3 ಜನ ವಿಚಾರಣಾ ಖೈದಿಗಳ ಬಳಿ ತಪ್ಪಿಸಿಕೊಂಡು ಹೋಗಲು ಅನುವು ಮಾಡಿಕೊಟ್ಟು ನಿಮ್ಮಗಳ ಅಶಿಸ್ತು ಮತ್ತು ದುರ್ನಡತೆಯನ್ನು ಎತ್ತಿ ತೋರಿರುತ್ತೀರಿ."

4) "ಎಹೆಚ್‌ಸಿ 6, ಮಲ್ಲಯ್ಯ, `ಎ` ವಿಭಾಗ, ಎಪಿಸಿ 594, ಅಂಕೇಗೌಡ, 1ನೇ ವಿಭಾಗ ಎಪಿಸಿ 1843, ವೆಂಕಟರಾಮು, `ಬಿ` ವಿಭಾಗ ಸಿ.ಎ.ಆರ್.(ಕೇಂದ್ರ), ಬೆಂಗಳೂರು ಆದ ನೀವುಗಳು ಶಿಸ್ತಿನ ಇಲಾಖೆಯಲ್ಲಿ ಸೇವ ಸಲ್ಲಿಸುತ್ತಿದ್ದು, ದಿನಾಂಕ:18-03-2000ರಂದು ರಾತ್ರಿ ದಾವಣಗೆರೆಯಿಂದ ಬೆಂಗಳೂರಿಗೆ ಬಸ್ಸಿನಲ್ಲಿ 3 ಜನ ವಿಚಾರಣಾ ಖೈದಿಗಳನ್ನು ಬೆಂಗಾವಲು ಮಾಡಿಕೊಂಡು ಬರುವಾಗ ಈ ಖೈದಿಗಳಿಗೆ ಕೈಕೋಳ (ಬೇಡಿ) ಮತ್ತು ಸರಪಳಿಯನ್ನು ತೊಡಿಸುವಾಗ ಸರಿಯಾದ ರೀತಿಯಲ್ಲಿ ತೊಡಿಸದೆ, ಸರಿಯಾಗಿ ಎಚ್ಚರ ವಹಿಸದೆ ಹಾಗೂ ಖೈದಿಗಳೊಂದಿಗೆ ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಅನುಸರಿಸಬೇಕಾದ ನಿಯಮಗಳನ್ನು ಅನುಸರಿಸದೆ ಇದ್ದ ಕಾರಣ, ಈ 3 ಜನ ಖೈದಿಗಳಲ್ಲಿ ಒಬ್ಬನಾದ ಖೈದಿ ಶೀನಾ ಬಿನ್ ರಮೇಶ್ ಎಂಬುವವನು ಕೈಗಳಿಗೆ ತೊಡಿಸಿದ್ದ (ಹಾಕಿರುವ) ಕೈಕೋಳದಿಂದ ನುಣಚಿಕೊಂಡು ದಿನಾಂಕ:18-03-2000 ರಂದು ರಾತ್ರಿ ಸುಮಾರು 11-05 ಗಂಟೆಯ ಸಮಯದಲ್ಲಿ ಚಿತ್ರದುರ್ಗ ಬಳಿ ಬಸ್ಸಿನಿಂದ ತಪ್ಪಿಸಿಕೊಂಡು ಹೋಗಿ ಪರಾರಿಯಾಗಿರುತ್ತಾರೆ. ಇದು ನಿಮ್ಮಗಳ ಬೆಂಗಾವಲು ಕರ್ತವ್ಯದಲ್ಲಿನ ಅಜಾಗರುಕತೆ, ಅಸಡ್ಡೆತನ, ಬೇಜವಾಬ್ದಾರಿ ಮತ್ತು ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ. ಅಲ್ಲದೆ ಇದರಿಂದ ಇಲಾಖೆಯಲ್ಲಿನ ಕರ್ತವ್ಯದ ಬಗ್ಗೆ ಕೆಟ್ಟ ಹೆಸರು ಬರುವಂತೆ ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಿಎಆರ್ (ಕೇಂದ್ರ) ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:23/07/2002ರ ಆದೇಶದಲ್ಲಿ ಅರ್ಜಿದಾರರು, ನಿವೃತ್ತಿ ಹೊಂದುತ್ತಿರುವುದರಿಂದ, ಇವರ ಉಪದಾನದ (ಡಿಸಿಆರ್‌ಜಿ) ಮೊಬಲಗಿನಲ್ಲಿ ಶೇಕಡ 20 ರಷ್ಟು ಮೊತ್ತವನ್ನು ಕಡಿತಗೊಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ಇವರು ಮೇಲ್ಮನವಿದಾರರ ವಿರುದ್ಧ ಹೊರಿಸಿರುವ ಆರೋಪಗಳು ಸಾಕ್ಷ್ಯಾಧಾರಗಳ ಮೇಲೆ ಸಾಬೀತಾಗಿರುವ ಕಾರಣ ಹಾಗೂ ಇವು ಗಂಭೀರ ಸ್ವರೂಪದ್ದಾಗಿದ್ದು ಶಿಸ್ತು ಪ್ರಾಧಿಕಾರಿ ಆದೇಶವು ಸಮಂಜಸವಾಗಿರುವುದೆಂದು ಪರಿಗಣಿಸಿ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:31-12-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಇರುವ ಆರೋಪಗಳು ಗಂಭೀರ ಸ್ವರೂಪದ್ದಾಗಿದ್ದರೂ ಸಹ ಮಾನವೀಯ ದೃಷ್ಟಿಯಿಂದ ಪರಿಗಣಿಸಿ ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 14 ಪೊಸಿಅ 2003, ಬೆಂಗಳೂರು, ದಿನಾಂಕ:17ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಲ್ಲಯ್ಯ, ನಿವೃತ್ತ ಹೆಚ್‌ಸಿ 6, ಸಿಎಆರ್ (ಕೇಂದ್ರ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 911

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎ.ಚಂದ್ರಪ್ಪ, ಸಿಪಿಸಿ 190, ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಡೆಂಟ್ ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/2/ ಡಿಇ/10/1999. ಆಪು ಸಂಖ್ಯೆ: 364/2000-01. 9/12-01-2001.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು, 158/2000-01. ದಿನಾಂಕ: 28-10-2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-05-2004.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/12/2004. ದಿನಾಂಕ:23-07-2004.
5. ಪ್ರಧಾನ ಅಪರ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಪ.ದ.ನ್ಯಾ.ದಂ.ಗಳ ನ್ಯಾಯಾಲಯ ಮದ್ದೂರು ಇವರ ಆದೇಶ ಸಿಸಿ ಸಂಖ್ಯೆ:984/99 ದಿನಾಂಕ:23-10-2001.
6. ಪ್ರಧಾನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹಾಗೂ ಜೆಎಂಎಫ್‌ಸಿ ಮದ್ದೂರು ಇವರ ಆದೇಶ ಸಂಖ್ಯೆ:ಸಿಸಿ,1023/99, ದಿನಾಂಕ:22-05-2002.

**ಪ್ರಸ್ತಾವನೆ:**

ಶ್ರೀ ಎ,ಚಂದ್ರಪ್ಪ, ಸಿಪಿಸಿ 190, ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** ''ಶ್ರೀ ಎ.ಚಂದ್ರಪ್ಪ, ಸಿಪಿಸಿ. 190 ಕೆಸ್ತೂರು ಪೊಲೀಸ್ ಠಾಣೆ ಹಾಲಿ ಕೆ.ಆರ್.ಸಾಗರ ಪೊಲೀಸ್ ಠಾಣೆ ಆದ ನೀವು ದಿನಾಂಕ:24-09-1999ರಂದು ತನ್ನ ಮೇಲಾಧಿಕಾರಿಗಳಿಂದ ಯಾವುದೇ ಪೂರ್ವಾನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಟ್ಟು ಮದ್ದೂರಿಗೆ ಬಂದು, ಮದ್ದೂರು ಟೌನ್ ಹೊಳೆ ಬೀದಿಯಲ್ಲಿರುವ ಚೈತ್ರ ಮಿಲ್ಟ್ರಿ ಹೋಟೆಲ್‌ನಲ್ಲಿ ಸಾರ್ವಜನಿಕ ವ್ಯಕ್ತಿ ಹೆಮ್ಮನಹಳ್ಳಿ ಕೃಷ್ಣ ಎಂಬುವರೊಡನೆ ಕುಳಿತು ಮಧ್ಯಪಾನ ಮಾಡಿ ಶ್ರೀ ಲಕ್ಷ್ಮಿವೆಂಕಟೇಶ್ವರ ಮಿಲ್ಟ್ರಿ ಹೋಟೆಲ್ ಮಾಲೀಕರಾದ ಶ್ರೀ ಗೋಪಾಲಕೃಷ್ಣ ಮತ್ತು ಮದ್ದೂರು ಸಾರ್ವಜನಿಕ ಆಸ್ಪತ್ರೆಯ ವೈದ್ಯಾಧಿಕಾರಿಗಳಾದ ಡಾ:ರಾಜಶೇಖರರವರೊಡನೆ ಅನುಚಿತವಾಗಿ ವರ್ತಿಸಿ ಅತೀವ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿ ಮದ್ದೂರು ಪೊಲೀಸ್ ಠಾಣೆಯ ಪ್ರ.ಸಂಖ್ಯೆ:291:99 ಕಲಂ.323-504-506 ಜೊತೆ 34 ಐಪಿಸಿ ಮತ್ತು ಪ್ರ.ಸಂಖ್ಯೆ:292:99 ಕಲಂ.353 ಐಪಿಸಿ ಕೇಸುಗಳಲ್ಲಿ ಆರೋಪಿಯಾಗಿರುವುದಲ್ಲದೆ ದಿನಾಂಕ:24-09-1999 ರಿಂದ ದಿನಾಂಕ:26-09-1999ರವರೆವಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿರುವುದು ಎಂದು ಆರೋಪಿಸಲಾಗಿದೆ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಡೆಂಟ್ ಮಂಡ್ಯ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:09/12-01-2001ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಮುಂದೂಡಿದ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ದಕ್ಷಿಣ ವಲಯ ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:28-10-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿದ್ದು, ಶಿಸ್ತಿಗೆ ಒಳಪಡದೆ, ಮೇಲಾಧಿಕಾರಿಗಳ ಅನುಮತಿ ಇಲ್ಲದೆ, ಠಾಣೆಯಿಂದ ಹಾಗೂ ಕೇಂದ್ರ ಸ್ಥಾನದಿಂದ ಗೈರುಹಾಜರಾಗಿ ಮತ್ತೊಂದು ಪಟ್ಟಣಕ್ಕೆ ತೆರಳಿ, ಅಲ್ಲಿ ತಮ್ಮ ಸ್ನೇಹಿತನೊಂದಿಗೆ ಮಧ್ಯಪಾನ ಮಾಡಿ, ಅಸಭ್ಯ ರೀತಿಯಲ್ಲಿ ವರ್ತಿಸಿರುವುದು ಸಾಬೀತಾಗಿರುತ್ತದೆ. ಇವರ ವಿರುದ್ಧ ದಾಖಲಾಗಿದ್ದ ಎರಡು ಕ್ರಿಮಿನಲ್ ಪ್ರಕರಣಗಳು ಖುಲಾಸೆ ಆಗಿದ್ದರೂ, ಕ್ರಿಮಿನಲ್ ಪ್ರೊಸೀಡಿಂಗ್ಸ್ ಬೇರೆ ಇಲಾಖಾ ವಿಚಾರಣೆ ಪ್ರಕ್ರಿಯೇ ಬೇರೆ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 24 ಪೊಸಿಅ 2004, ಬೆಂಗಳೂರು, ದಿನಾಂಕ:18ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಚಂದ್ರಪ್ಪ, ಸಿಪಿಸಿ 190, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 915

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಹೆಚ್.ಪುರುಷೋತ್ತಮ, ಹೆಚ್‌ಸಿ 245, ಮೋಕಾ ಪೊಲೀಸ್ ಠಾಣೆ, ಬಳ್ಳಾರಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ,ದಾವಣಗೆರೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ/2/ಡಿಇ/8/2001-02, ಓಬಿ ಸಂಖ್ಯೆ:76/2003-04. ದಿನಾಂಕ:03-07-2003.

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/6/17/2004-05. ದಿನಾಂಕ:23-07-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:11-11-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/19/2005, ದಿನಾಂಕ:22-03-2005.

**ಪ್ರಸ್ತಾವನೆ:**

ಶ್ರೀ ಹೆಚ್.ಪುರುಷೋತ್ತಮ್, ಸಿಹೆಚ್‌ಸಿ 245, ಮೋಕಾ ಪೊಲೀಸ್ ಠಾಣೆ,ಬಳ್ಳಾರಿ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "ನೀವು ದಿನಾಂಕ:26-08-2001ರಂದು ಸಾಯಂಕಾಲ ಮೋಕಾ ಪೊಲೀಸ್ ಠಾಣೆಯ ಠಾಣಾಧಿಕಾರಿಯಾಗಿದ್ದ ವೇಳೆಯಲ್ಲಿ ಸಂಜೆ 4-30 ಗಂಟೆ ಸುಮಾರಿಗೆ ಬಳ್ಳಾರಿಯಿಂದ ಎರ್ರಿಸ್ವಾಮಿ ಇವರು ಪೋನ್ ಮೂಲಕ ವೇಣನೂರಿನಲ್ಲಿ ದಾಸರ ಜನಾಂಗದವರ ಮೇಲೆ ನಾಯಕ ಜನಾಂಗದವರು ಗಲಾಟೆ ಮಾಡುತ್ತಿದ್ದಾರೆ ಕೂಡಲೇ ಅಲ್ಲಿಗೆ ಹೋಗುವ ಬಗ್ಗೆ ಪಿ.ಎಸ್.ಐ/ಎ.ಎಸ್.ಐ. ಇಲ್ಲದಿದ್ದಾಗ ನಿಮಗೆ ಠಾಣಾ ಸೆಂಟ್ರಿ ಕೈಯಲ್ಲಿ ಪೋನ್ ಹಿಡಿದು ವಿಷಯವನ್ನು ತಿಳಿಸಿದಾಗ ಅವೆಲ್ಲಾ ಗಲಾಟೆ ಯಾರು ನೋಡುತ್ತಾರೆ, ಇಲ್ಲ ಎಂದು ಹೇಳಿ ಅಂತ ಹೇಳಿದ್ದನ್ನು, ಅವರು ಪೋನ್‌ನಲ್ಲಿ ಕೇಳಿದ್ದು ಈ ವಿಷಯದಲ್ಲಿ ನೀವು ಕರ್ತವ್ಯದಲ್ಲಿ ಘೋರ ಘಟನೆಯ ಬಗ್ಗೆ ಮಾಹಿತಿ ಬಂದಾಗ ಕೂಡಾ ಅದನ್ನು ಫೋನ್‌ನಲ್ಲಿ ಮಾತನಾಡದೆ ಮೇಲಾಧಿಕಾರಿಗಳಿಗೆ ಸದರಿ ಘಟನೆಯನ್ನು ತಿಳಿಸದೆ ತಕ್ಷಣವೇ ವೇಣನೂರು ಗ್ರಾಮಕ್ಕೆ ಹೆಚ್ಚಿನ ಸಿಬ್ಬಂದಿಯೊಂದಿಗೆ ಹೋಗದೆ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಪ್ರದರ್ಶಿಸಿದ್ದೀರಿ ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:03-07-2003ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23-07-2004ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳಿಲ್ಲದಿರುವ ಕಾರಣ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 35 ಪೊಸಿಅ 2005, ಬೆಂಗಳೂರು, ದಿನಾಂಕ:18ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಪುರುಷೋತ್ತಮ ಹೆಚ್‌ಸಿ 245 ಮೋಕಾ ಪೊಲೀಸ್ ಠಾಣೆ ಬಳ್ಳಾರಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 917

**ವಿಷಯ:** ಶ್ರೀ ವೈ.ಡಿ. ಪಾಟೀಲ ದ್ವಿ.ದ.ಸ. ರವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರೀಕ್ಷಕರು ಮತ್ತು ಆರಕ್ಷಕ ಮಹಾ ನಿರ್ದೇಶಕರ ಪತ್ರದ ಸಂಖ್ಯೆ: ಸಿಬ್ಬಂದಿ-6/91/ 2003-04, ದಿನಾಂಕ:03.02.2005 ಹಾಗೂ 30.04.2005.

**ಪ್ರಸ್ತಾವನೆ:**

ಶ್ರೀ ವೈ.ಡಿ. ಪಾಟೀಲ, ದ್ವಿತೀಯ ದರ್ಜೆ ಸಹಾಯಕರು, ಡಿಪಿಓ ಹಾವೇರಿ ರವರು ಅನುಕಂಪದ ಆಧಾರದ ಮೇಲೆ ದಿನಾಂಕ: 30.04.1997 ರಂದು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಈ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ನಿಬಂಧನೆ ಮೇರೆಗೆ ನೇಮಕ ಮಾಡಿಕೊಳ್ಳಲಾಗಿರುತ್ತದೆ. ಅವರು ಎಸ್.ಎಸ್.ಎಲ್.ಸಿ.ಯಲ್ಲಿ ಕನ್ನಡ ಪ್ರಥಮ ಭಾಷೆಯನ್ನಾಗಿ ತೆಗೆದುಕೊಂಡು ಉತ್ತೀರ್ಣರಾಗಿದ್ದರಿಂದ ಕನ್ನಡ ಭಾಷೆ ಪರೀಕ್ಷೆಯನ್ನು ತೆಗೆದುಕೊಳ್ಳುವುದರಿಂದ ವಿನಾಯಿತಿಯನ್ನು ಪಡೆದಿರುತ್ತಾರೆ. ಆದರೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದೆ ಇದ್ದುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(2) ಪ್ರಕಾರ ದಿನಾಂಕ: 30.04.1999 ರಿಂದ 29.04.2000 ರವರೆಗೆ ವಿಸ್ತರಿಸಲಾಗಿತ್ತು ಸದರಿಯವರು 98ರ 2ನೇ ಅಧಿವೇಶನದಲ್ಲಿ ಅಕೌಂಟ್ಸ್ ಲೋಯರ್ ಹಾಗೂ 99ರ ಒಂದನೇ ಅಧಿವೇಶನದಲ್ಲಿ ದಿನಾಂಕ: 25.07.2000 ರಂದು

ಪೊಲೀಸ್ ಮ್ಯಾನುಯಲ್ ಪರೀಕ್ಷೆಗೆ ಹಾಜರಾತಿ ಉತ್ತೀರ್ಣರಾಗಿರುತ್ತಾರೆ ಸದರಿಯವರ ಖಾಯಂ ಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(1) ಪ್ರಕಾರ ದಿನಾಂಕ: 30.04.2000 ರಿಂದ 25.07.2000 ದವರೆಗೆ ಪರಿವೀಕ್ಷಣಾ ಅವಧಿ ವಿಸ್ತರಿಸುವಂತೆ ಕೋರಿ ಮಹಾ ನಿರೀಕ್ಷಕರು ಮತ್ತು ಆರಕ್ಷಕ ಮಹಾ ನಿರ್ದೇಶಕರವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 9 ಪೊಸಿಲಿ 2005, ಬೆಂಗಳೂರು, ದಿನಾಂಕ: 18ನೇ ಜೂನ್, 2005**

ಶ್ರೀ ವೈ.ಡಿ. ಪಾಟೀಲ, ದ್ವಿತೀಯ ದರ್ಜೆ ಸಹಾಯಕ ಇವರ ಖಾಯಂಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 4(1)(1)ರ ಪ್ರಕಾರ ದಿನಾಂಕ: 30.04.2000 ರಿಂದ 25.07.2000ರವರೆಗೆ ವಿಸ್ತರಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಸಾಇ 27019 ಅಂಅಸ 2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 940

## ಕಂದಾಯ ಸಚಿವಾಲಯ

### ಆದೇಶ

**ಸಂಖ್ಯೆ: ಕಂಇ 196 ಮುಸೇವಿ 2004(ಭಾಗ), ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಗೋಮಟೇಶ್ವರ ಭಗವಾನ್ ಶ್ರೀ ಬಾಹುಬಲಿ ಮಹಾಮಸ್ತಕಾಭಿಷೇಕ ಮಹೋತ್ಸವ 2006 ಸಮಿತಿ ರಚನೆ ಕುರಿತು ಆದೇಶ ಸಂಖ್ಯೆ: ಕಂಇ 196 ಮುಸೇವಿ 2004 ದಿನಾಂಕ: 12.08.2004ರ ಆದೇಶ ಮತ್ತು ಆದೇಶ ಸಂಖ್ಯೆ: ಕಂಇ 196 ಮುಸೇವಿ 2004(ಭಾಗ) ದಿನಾಂಕ: 16.12.2004 ಮತ್ತು 11.04.2005ಗಳಲ್ಲಿ ರಚಿಸಿರುವ ರಾಜ್ಯ ಮಟ್ಟದ ಸಮಿತಿಗೆ ಈ ಕೆಳಕಂಡ ಸದಸ್ಯರುಗಳನ್ನು ಸೇರ್ಪಡೆಗೊಳಿಸಿ ಆದೇಶಿಸಿದೆ;

**ಕ್ಷೇತ್ರದ ಹಾಗೂ ಸಮಾಜದ ಪ್ರತಿನಿಧಿಗಳು**

20) ಶ್ರೀ ಎಸ್.ಡಿ. ಸಾಮ್ರಾಜ್ಯ, ಮಾಜಿ ಶಾಸಕರು ಶಿರ್ತಾಡಿ, ಮಂಗಳೂರು ತಾಲ್ಲೂಕು.
21) ಶ್ರೀ ಕೆ. ಜಯವರ್ಮರಾಜ ಬಲ್ಲಾಳ್, ವ್ಯವಸ್ಥಾಪಕ ನಿರ್ದೇಶಕರು, ಬಲ್ಲಾಳ್ ರೆಸಿಡೆನ್ಸಿ, ರೆಸಿಡೆನ್ಸಿ ರಸ್ತೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 904

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆನಾಸ 84 ಆಇಸೇ 2003, ಬೆಂಗಳೂರು, ದಿನಾಂಕ: 17ನೇ ಜೂನ್, 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆನಾಸ 84 ಆಇಸೇ 2003, ದಿನಾಂಕ: 11.08.2004ರ 8ನೇ ಸಾಲಿನಲ್ಲಿರುವ **"1978ರ"** ಎಂಬುದಕ್ಕೆ ಬದಲಾಗಿ **"1973ರ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 905

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2004, ದಿನಾಂಕ: 02.07.2004.
2. ಟಿಪ್ಪಣಿ ಸಂಖ್ಯೆ: ಅಸಪ/ ಉಮುಮಂ/870/ 2005, ದಿನಾಂಕ: 01.06.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 02.07.2004ರ ಸರ್ಕಾರಿ ಆದೇಶದಲ್ಲಿ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿನ ಕಾರ್ಯದರ್ಶಿ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಸದರಿ ಹುದ್ದೆಯನ್ನು ದಿನಾಂಕ: 16.06.2005ರಿಂದ ಮುಂದುವರೆಸುವಂತೆ ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 2005, ಬೆಂಗಳೂರು, ದಿನಾಂಕ: 25ನೇ ಜೂನ್, 2005**

ಮಾನ್ಯ ಉಪಮುಖ್ಯ ಮಂತ್ರಿಯವರ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 16.06.2005 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 906ಎ

## ಸಹಕಾರ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಸಿಎಂಡಬ್ಲ್ಯೂ 293 ಸಿಸಿಜಿ 2003, ಬೆಂಗಳೂರು, ದಿನಾಂಕ: 13ನೇ ಜೂನ್, 2005**

ಕೆ.ಸಿ.ಸಿ. ಬ್ಯಾಂಕ್ ಧಾರವಾಡ ಇದರ ಪುನಶ್ಚೇತನಗೊಳಿಸಲು ಬೆಳೆಸಾಲ/ ಮಧ್ಯಮಾವಧಿ ಸಾಲದ ಮೇಲಿನ ಬಡ್ಡಿ ಮನ್ನಾ ಕುರಿತು ಹೊರಡಿಸಲಾಗಿದ್ದ ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 293 ಸಿಸಿಬಿ 2003 ದಿನಾಂಕ: **10.05.2005ರ ಆದೇಶ ಭಾಗದ ಮೊದಲನೇ ಕಂಡಿಕೆಯಲ್ಲಿನ ಮೂರನೇ ಸಾಲಿನಲ್ಲಿ "ರೂ.12.50 ಕೋಟಿ (ರೂಪಾಯಿ ಹನ್ನೆರಡು ಕೋಟಿ ಐವತ್ತು ಲಕ್ಷಗಳು ಮಾತ್ರ) ಗಳ ಪಾವತಿಗೆ ಮಂಜೂರಾತಿ ನೀಡಿದೆ" ಎಂಬುದರ ಬದಲಾಗಿ "ರೂ.6.25 ಕೋಟಿ (ರೂಪಾಯಿ ಆರು ಕೋಟಿ ಇಪ್ಪತ್ತೈದು ಲಕ್ಷಗಳು ಮಾತ್ರ)ಗಳ ಪಾವತಿಗೆ ಮಂಜೂರಾತಿ ನೀಡಿದೆ"** ಎಂಬುದಾಗಿ ಓದಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ: 173 ವೆಚ್ಚ-2:2005 ದಿನಾಂಕ: 10.05.2005 ಮತ್ತು ಟಿಪ್ಪಣಿ ಸಂಖ್ಯೆ: ಆಇ:334: ವೆಚ್ಚ-2:2005 ದಿನಾಂಕ: 06.06.2005ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 908

## ಕಂದಾಯ ಸಚಿವಾಲಯ

**ವಿಷಯ:** ಕಾರ್ಕಳ ತಾಲ್ಲೂಕು, ಮುದ್ರಾಡಿ ಗ್ರಾಮದ ಭಕ್ರೇ ಮಠ ಮಹಿಷ ಮರ್ಧಿನಿ ದುರ್ಗಾಪರಮೇಶ್ವರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ ಸಿಆರ್/ 28/ 2004-05, ದಿನಾಂಕ: 03.05.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕಿನ ಮುದ್ರಾಡಿ ಗ್ರಾಮ, ಭಕ್ರೇಮಠ ಶ್ರೀ ಮಹಿಷಮರ್ಧಿನಿ ದುರ್ಗಾಪರಮೇಶ್ವರಿ ದೇವಸ್ಥಾನ ಹಾಗೂ ಶ್ರೀ ಭಕ್ರೇ ದೇವರು ಶ್ರೀ ವಾಸುದೇವ ಭಟ್ಟರ ಒಂದು ನಿರ್ದಿಷ್ಟ ಕುಟುಂಬಕ್ಕೆ ಸೇರಿರುವುದಾಗಿ ಹಾಗೂ ಸದರಿ ಕುಟುಂಬಸ್ಥರ ಆಡಳಿತ ಹಾಗೂ ಪೂಜೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಶ್ರೀ ವಾಸುದೇವ ಭಟ್ಟರ ವಂಶಸ್ಥರು ಪೂಜೆಗೆ ಸಂಬಂಧಿಸಿದ ಶಾಸ್ತ್ರ ಪಾಠ, ಪ್ರವಚನಗಳನ್ನು ನಡೆಸಿಕೊಂಡು ಬರಲು ಭಕ್ರೇ ಮಠವನ್ನು ಸ್ಥಾಪಿಸಿದ್ದಾರೆ. ಈ ಮಠದಲ್ಲಿ ಶ್ರೀ ಮಹಿಷಮರ್ಧಿನಿ ದುರ್ಗಾಪರಮೇಶ್ವರಿ ದೇವಸ್ಥಾನ, ಶ್ರೀ ಭಕ್ರೇ ದೇವರ ದೇವಸ್ಥಾನಗಳನ್ನು ಸ್ಥಾಪಿಸಿರುವುದರಿಂದ ಸದರಿ ದೇವಸ್ಥಾನಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಅಧಿನಿಯಮ 1ರ ಪ್ರಾರಂಭಿಕ 4(ii)ರಂತೆ ಅಧಿನಿಯಮದ ವ್ಯಾಪ್ತಿಯಿಂದ ವಿನಾಯಿತಿಗೊಳಿಸಲು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 78 ಮುಆಬಿ 2004, ಬೆಂಗಳೂರು, ದಿನಾಂಕ: 16ನೇ ಜೂನ್, 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪನಿಯಮ 4(ii)ರ ಪ್ರಕಾರ ಒಂದು ಹಿಂದೂ ಕುಟುಂಬವು ಸ್ಥಾಪಿಸಿ, ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರವು ಹೊರಡಿಸಿರುವ ದಿನಾಂಕ: 30.04.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಮುದ್ರಾಡಿ ಗ್ರಾಮದ ಭಕ್ರೇ ಮಠ ಶ್ರೀ ಮಹಿಷಮರ್ಧಿನಿ ದುರ್ಗಾಪರಮೇಶ್ವರಿ ದೇವಸ್ಥಾನ ಕ್ರಮ ಸಂಖ್ಯೆ: 60 ಪುಟ ಸಂಖ್ಯೆ: 727 ಹಾಗೂ ಶ್ರೀ ಭಕ್ರೇ ದೇವರು ಕ್ರಮ ಸಂಖ್ಯೆ: 82 ಪುಟ ಸಂಖ್ಯೆ: 728 ಇವುಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಜಯಚಂದ್ರ**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 918

## ಶಿಕ್ಷಣ ಸಚಿವಾಲಯ

**ವಿಷಯ:** ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ರಿಟ್ ಅರ್ಜಿ ಸಂಖ್ಯೆ: 16948/ 2004 (ಜಿ.ಎಮ್/ ಪಿಸಿಸಿ)ರಲ್ಲಿ ನ್ಯಾಯಾಲಯ ದಿನಾಂಕ: 16.04.2004ರಂದು ನೀಡಿರುವ ಆದೇಶ.

**ಪ್ರಸ್ತಾವನೆ:**

ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿನ ಆಡಳಿತ ಮಂಡಳಿಯ ವಿವಾದವು ಪ್ರಸ್ತುತ ನ್ಯಾಯಾಲಯದಲ್ಲಿ ದಾಖಲಾಗಿದ್ದು, ಪ್ರಕರಣವು ನ್ಯಾಯಾಲಯದಲ್ಲಿ ಇತ್ಯರ್ಥವಾಗುವವರೆಗೆ ಹಾವೇರಿ ಉಪ ವಿಭಾಗಾಧಿಕಾರಿಯವರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ: 16.04.2004ರ ಅನ್ವಯ ನ್ಯಾಯಾಲಯ ಆದೇಶಿಸಲಾಗಿತ್ತು. ಆ ಪ್ರಕಾರ ಅಂದಿನ ಹಾವೇರಿ ಉಪ ವಿಭಾಗಾಧಿಕಾರಿಗಳಾದ ಶ್ರೀ ಬಿ.ಹೆಚ್. ಪೂಜಾರ್‌ರವರು ಆಡಳಿತಾಧಿಕಾರಿಯಾಗಿ ದಿನಾಂಕ: 14.05.2004 ರಿಂದ ಅಧಿಕಾರ ವಹಿಸಿಕೊಂಡಿದ್ದರು. ಶ್ರೀ ಬಿ.ಎಚ್. ಪೂಜಾರ್‌ರವರು ದಿನಾಂಕ: 28.02.2005ರಂದು ವಯೋನಿವೃತ್ತಿ ಹೊಂದಿದ ಕಾರಣ ಹಾವೇರಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನದ ಸಹಾಯಕರು ಹೆಚ್ಚುವರಿ ಪ್ರಭಾರದಲ್ಲಿರುತ್ತಾರೆ. ಇದರಿಂದಾಗಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನದ ಸಹಾಯಕರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿಯೂ ನೇಮಕ ಮಾಡಲು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ಬೆಂಗಳೂರು, ದಿನಾಂಕ: 25ನೇ ಜೂನ್, 2005**

ಮೇಲೆ ವಿವರಿಸಿದ ಕಾರಣಗಳಿಂದಾಗಿ ರಾಣೆಬೆನ್ನೂರಿನ ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್ ಇಲ್ಲಿನ ಆಡಳಿತಾಧಿಕಾರಿಯನ್ನಾಗಿ ಹಾವೇರಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಆಡಳಿತಾಧಿಕಾರಿಯನ್ನಾಗಿ ಶ್ರೀ ಬಿ.ಹೆಚ್. ಪೂಜಾರ್ ರವರು ವಯೋನಿವೃತ್ತಿ ಹೊಂದಿದ ದಿನಾಂಕ: 28.02.2005ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮೇರಿ ಜಾಯ್ಸ್,**
ಸರ್ಕಾರದ ಉಪ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

ಪಿ.ಆರ್. 919

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಇತರೆ ಜಿಲ್ಲಾ ರಸ್ತೆ ಹಾಗೂ ಹಳ್ಳಿ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ:ಸಇಂ3: ಸಿಆರ್‌ಎಫ್: 2005-06, ದಿನಾಂಕ: 06.06.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಮತ್ತು ಮಾಗಡಿ ತಾಲ್ಲೂಕಿಗೆ ಸೇರಿದ ಈ ಕೆಳಕಂಡ ಇತರೆ ಜಿಲ್ಲಾ ರಸ್ತೆ ಹಾಗೂ ಹಳ್ಳಿ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1. ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಕೂಡ್ಲಿಗೆರೆ-ಕಮ್ಮಾರಗಟ್ಟೆ ರಸ್ತೆ, (ಮಾರ್ಗ ಕುರುಬರ ವಿಟ್ಲಾಪುರ ನಿಂಬೆಗೊಂಧಿ ಸೈದರ ಕಲ್ಲಹಳ್ಳಿ) 6.00 ಕಿ.ಮೀ. (ಇತರೆ ಜಿಲ್ಲಾ ರಸ್ತೆ)
2. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಮೋಟಗಾನಹಳ್ಳಿಯಿಂದ ಅಕ್ಕಿನಾಳ ಮಾರ್ಗದ ರಸ್ತೆ (ಹಳ್ಳಿ ರಸ್ತೆ) 13.00 ಕಿ.ಮೀ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 92 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಇತರೆ ಜಿಲ್ಲಾ ರಸ್ತೆ ಹಾಗೂ ಹಳ್ಳಿರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1. ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಕೂಡ್ಲಿಗೆರೆ-ಕಮ್ಮಾರಗಟ್ಟೆ ರಸ್ತೆ, (ಮಾರ್ಗ ಕುರುಬರ ವಿಟ್ಲಾಪುರ ನಿಂಬೆಗೊಂಧಿ ಸೈದರ ಕಲ್ಲಹಳ್ಳಿ) 6.00 ಕಿ.ಮೀ. (ಇತರೆ ಜಿಲ್ಲಾ ರಸ್ತೆ)
2. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಮೋಟಗಾನಹಳ್ಳಿಯಿಂದ ಅಕ್ಕಿನಾಳ ಮಾರ್ಗದ ರಸ್ತೆ (ಹಳ್ಳಿ ರಸ್ತೆ) 13.00 ಕಿ.ಮೀ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೇಖ್ ಅಬ್ದುಲ್ ವಾಜಿದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 920

## INFRASTRUCTURE DEVELOPMENT SECRETARIAT

**Sub:** Bangalore International Airport Project release of funds towards state support to the project.

**Read:** 1. Letter No. GM/BIAP/5385/2004-05, Dated:11.03.2005 from the Executive Director, KSIIDC.
2. Letter Dated: 10.05.2005 from CEO, BIAL.

**Preamble:**

Government of Karnataka have agreed to provide a maximum State Financial Support of Rs.350 Crores for the Bangalore International Airport Project. As per the State Support Agreement executed on

20th January, 2005. This includes a base State Support of Rs.2722.5 million and a contingency of Rs. 777.5 million. The indicative drwan down schedule for the base State Support was contained in the State Support Agreement which was finalized and the supplemental State Support Agreement (SSA) signed. As per this schedule the first draw down of Rs. 45.72 crores this required to be released to BIAL immediately after the Financial Close is achieved.

All Project Agreements required for achievement of Financial Close have now been concluded and the project is expected to achieve Financial Close very shortly and thereafter construction on the Project will commence. It is therefore, required to ensure that the KSIIDC is enabled to release this amount of Rs.45.72 crores to BIAL immediately upon the receipt of the notice of Financial Close.

Further BIAL in its letter Dated 10.05.2005 read at Sl.No.2 above has also reiterated to fulfill the obligation of State Support base amount disbursement of Rs.45.71 crores. In view of this KSIIDC has requested to release the same out of the budgetary provision made in the year 2005-06. Hence the following order:

**Government Order No. IDD 11 DIA 2005, Bangalore, Dated: 22nd June, 2005**

In view of the circumstances explained in the preamble, Government agrees to release a sum of Rs.45.71 crores (Rupees forty five crores and seventy one lakhs only) towards I instalment of draw down state support for the year 2005-06 for Bangalore International Airport Project to KSIIDC under head of account 5465-01-190-2-02-100 (P) out of Rs.95.15 crores allocation available during 2005-06.

The Managing Director, KSIIDC is authorized to draw the above amount i.e. Rs.45.71 crores (Rupees forty five crores seventy one lakhs only) on a payee's receipt countersigned by the Under Secretary to Government, Infrastructure Development Department. However he should take prior approval of the Infrastructure Development Department before actual release to the Bangalore International Airport after achievement of Financial Close.

This order is issued under Finance Department's concurrence in UO No. FD 996 Exp-I/05, Dated: 03.06.2005.

By Order and in the name of the Governor of Karnataka,
**T.B. RENUKAPRASAD**
Under Secretary to Government,
Infrastructure Development Department.

PR-921

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಟಿ.ಡಿ. ಅಭಯಕುಮಾರ್, ನಿವೃತ್ತ ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ, ಇವರು ವಯೋನಿವೃತ್ತಿಯ ನಂತರ ಸ್ವಗ್ರಾಮ ಪ್ರಯಾಣ ಕೈಗೊಂಡಿರುವುದಕ್ಕೆ ಪ್ರಯಾಣ ಭತ್ಯೆ ಮಂಜೂರು ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** ಶ್ರೀ ಟಿ.ಡಿ. ಅಭಯಕುಮಾರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಮೈಸೂರು ಇವರ ಮನವಿ ಪತ್ರ ದಿನಾಂಕ: 05.04.2005 ಹಾಗೂ 18.05.2005.

**ಪ್ರಸ್ತಾವನೆ:**

ಮೇಲೆ ಓದಲಾದ ಮನವಿ ಪತ್ರಗಳಲ್ಲಿ ಶ್ರೀ ಟಿ.ಡಿ. ಅಭಯಕುಮಾರ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ, ಇವರು ದಿನಾಂಕ: 30.10.2004ರಂದು ನಿವೃತ್ತಿ ಹೊಂದಿದ ನಂತರ ದಿನಾಂಕ: 27.11.2004ರಂದು ಅವರ ಕುಟುಂಬ ಸದಸ್ಯರೊಂದಿಗೆ ಸ್ವಗ್ರಾಮಕ್ಕೆ ಅಂದರೆ ಬೆಂಗಳೂರಿನಿಂದ ಮೈಸೂರಿಗೆ ಪ್ರಯಾಣಿಸಿದ್ದು, ಪ್ರಯಾಣ ಭತ್ಯೆದ ಹಣ ಪಾವತಿಸುವಂತೆ ಕೋರಿರುತ್ತಾರೆ.

ಅಧಿಕಾರಿಯ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 147 ಅಸೇಇ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಶ್ರೀ ಟಿ.ಡಿ. ಅಭಯಕುಮಾರ್, ನಿವೃತ್ತ ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಇವರು ವಯೋನಿವೃತ್ತಿ ಹೊಂದಿರುವ ಪ್ರಯುಕ್ತ ದಿನಾಂಕ: 27.11.2004ರಂದು ಈ ಕೆಳಕಂಡ ಅವರ ಕುಟುಂಬ ಸದಸ್ಯರೊಂದಿಗೆ ಅವರ ಸ್ವಗ್ರಾಮವಾದ ಮೈಸೂರಿಗೆ ಬೆಂಗಳೂರಿನಿಂದ ಪ್ರಯಾಣಿಸಿರುವುದಕ್ಕೆ ಕರ್ನಾಟಕ ನಾಗರೀಕ ಸೇವಾ ನಿಯಮ 548-ಎ(1)ರ ಪ್ರಕಾರ ಪ್ರಯಾಣ ಭತ್ಯೆ ಮಂಜೂರು ಮಾಡಿದೆ.

| | | |
|---|---|---|
| 1. | ಶ್ರೀ ಟಿ.ಡಿ. ಅಭಯಕುಮಾರ್ | ಸ್ವಂತ 58 ವರ್ಷ |
| 2. | ಶ್ರೀಮತಿ ವೈ.ಹೆಚ್. ಜಯಲಕ್ಷ್ಮಿ | ಹೆಂಡತಿ 47 ವರ್ಷ |
| 3. | ಶ್ರೀ ಲೋಹಿತ್ ಅಭಯಕುಮಾರ್ | ಮಗ 27 ವರ್ಷ |
| 4. | ಕು. ಶ್ವೇತಾ ಅಭಯಕುಮಾರ್ | ಮಗಳು 26 ವರ್ಷ |

ದಿನಾಂಕ: 11.07.1996ರ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 926

**ವಿಷಯ:** 2005-06ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಯ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ: 22.11.2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸೇನೌವ 2005, ದಿನಾಂಕ: 02.05.2005.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇನೌವ 2005, ದಿನಾಂಕ: 20.05.2005.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇನೌವ 2005, ದಿನಾಂಕ: 14.06.2005.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2005, ದಿನಾಂಕ: 22.06.2005.

**ಪ್ರಸ್ತಾವನೆ:**

2005-06ನೇ ಸಾಲಿನಲ್ಲಿ ಮೇಲೆ ಓದಲಾದ ದಿನಾಂಕ: 22.11.2001ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿಗಳಿಗೆ ಒಳಪಟ್ಟು ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ:30.06.2005ರವರೆಗೆ ವಿಸ್ತರಿಸಲಾದ ಅವಧಿಯಲ್ಲಿ ಮಾಡುವ ವರ್ಗಾವಣೆ ಕುರಿತಂತೆ ಸೂಚನೆಗಳನ್ನು ಮೇಲೆ ಓದಲಾದ ದಿನಾಂಕ: 22.06.2005ರ ಆದೇಶದಲ್ಲಿ ನೀಡಲಾಗಿದ್ದು ಅದನ್ನು ಭಾಗಶಃ ಮಾರ್ಪಾಡು ಮಾಡಲುದ್ದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2005, ಬೆಂಗಳೂರು, ದಿನಾಂಕ: 30ನೇ ಜೂನ್, 2005**

ಮೇಲೆ (5)ರಲ್ಲಿ ಓದಲಾದ ದಿನಾಂಕ: 22.06.05ರ ಸರ್ಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಿ, 2005-06ನೇ ಸಾಲಿನಲ್ಲಿ ದಿನಾಂಕ: 30.06.2005ರೊಳಗೆ ಮಾಡುವ ಅವಧಿ ಪೂರ್ವ ವರ್ಗಾವಣಾ ಪ್ರಕರಣಗಳಿಗೆ ಸಂಬಂಧಪಟ್ಟ ಸಚಿವರ ಅನುಮೋದನೆ ಪಡೆಯತಕ್ಕದೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಕೆ. ಬಾಬುರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು).

ಪಿ.ಆರ್. 935

**ವಿಷಯ:** ಶ್ರೀ ಎಸ್.ಆರ್. ಹಿರೇಮಠ್, ಅ.ಕಾ. ಸಿ.ಆ.ಸು.ಇಲಾಖೆ (ಕಾರ್ಯಾಧ್ಯಯನ-2) ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಅವಧಿಯನ್ನು ವೇತನ ರಹಿತ ರಜೆಯಾಗಿ ಪರಿಗಣಿಸುವ ಕುರಿತು.

**ಓದಲಾಗಿದೆ:** ಕಡತದ ಸಂಖ್ಯೆ: ಸಿಆಸುಇ 40 ತಎಇ 2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಡಳಿತ ಇಲಾಖೆಯ ಕಡತದಲ್ಲಿ ಪ್ರಧಾನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಆ.ಸು, ತರಬೇತಿ ಮತ್ತು ರಾ.ವಿ.ವೇ) ಇವರು ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಕಾರ್ಯಾಧ್ಯಯನ-2) ಇವರು ದಿನಾಂಕ: 20.05.2005 ರಿಂದ 27.05.2005 ರವರೆಗೆ ಪೂರ್ವಭಾವಿಯಾಗಿ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಸರ್ಕಾರಿ ನೌಕರರಿಗೆ ಘನತೆಗೆ ತಕ್ಕಂತೆ ವರ್ತಿಸದೆ ಇರುವುದರಿಂದ ಸದರಿ ಅನಧಿಕೃತ ಗೈರು ಹಾಜರಿಯ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸತಕ್ಕದೆಂದು ಶಿಫಾರಸ್ಸು ಮಾಡಿ ಈ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 160 ಸಆರ 2005, ಬೆಂಗಳೂರು, ದಿನಾಂಕ: 22ನೇ ಜೂನ್, 2005**

ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಕಾರ್ಯಾಧ್ಯಯನ-2) ಇವರು ಪೂರ್ವಭಾವಿಯಾಗಿ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಅನಧಿಕೃತ ಗೈರು ಹಾಜರಾದ ದಿನಾಂಕ: 20.05.2005 ರಿಂದ 27.05.2005 ರವರೆಗೆ ಒಟ್ಟು 8 ದಿನಗಳ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ, ಹಾಗೂ ಸದರಿ ನಿಯಮದ ಅನುಸಾರ ಈ ಗೈರು ಹಾಜರಿಯ ಒಟ್ಟು 8 ದಿನಗಳನ್ನು ಅವರ ಖಾತೆಯಲ್ಲಿ ಜಮೆ ಇರುವ ಅರ್ಧ ವೇತನ ರಜೆಗೆ ಖರ್ಚು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 936

## HEALTH AND FAMILY WELFARE SECRETARIAT

**Sub:** Constitution of Bangalore Medical College Golden Jubilee Celebrations Committee.

**Read:**
1. G.O. No. HFW 202 MSF 2003 Dated: 22.12.2003.
2. Letter No. BMC/PS/225/03-04 Dated: 20.05.2004 of the Principal Bangalore Medical College.

**Preamble:**

1. In Government Order Dated 22.12.2003 the committee was constituted for Golden Jubilee celebrations of the Bangalore Medical College.

2. In the letter Dated: 20.05.2004, the Principal, Bangalore Medical College has informed that Dr. H. Sudarshan, Director of Vigilance (Health, Education and Social Welfare), of Karnataka Lokayuktha is one of the Alumini of Bangalore Medical College, who is interested in improving the college. Therefore it was suggested to include his name as one of the patrons of Bangalore Medical College Golden Jubilee Celebrations Committee.

**Government Order No. HFW 49 MSF 2004, Bangalore, Dated: 2nd June, 2005**

3. In the G.O. No. HFW 202 MSF 2003 Dated: 22.12.2003, after Sl.No.7 under the heading" Patrons in para 4, the following shall be inserted as Sl.No.8. "Dr. H. Sudharshan, Director of Vigilance (Health, Education and Social Welfare) of Karnataka Lokayukta Bangalore" as patron of the Bangalore Medical College Golden Jubilee Celebrations Committee.

By Order and in the name of the Governor of Karnataka,

**S. NAGARAJU**

PR-937

Under Secretary to Government,
Health and Family Welfare Department (Medical Education).

**ಆರ್ಥಿಕ ಸಚಿವಾಲಯ**

**ವಿಷಯ:** ಸರ್ಕಾರದ ವೆಚ್ಚಗಳಲ್ಲಿ ಕಟ್ಟುನಿಟ್ಟಿನ ಆರ್ಥಿಕ ಮಿತವ್ಯಯ ಕ್ರಮಗಳ ಪಾಲನೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಇ 3 ಬಿಇಎಂ 2001 ದಿನಾಂಕ: 17.10.2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಈಕಾಅ 2000 ದಿನಾಂಕ: 23.09.2003.
3. ಸರ್ಕಾರದ ಆದೇಶ ಸಂಖ್ಯೆ: ಆಇ 2 ಬಿಇಎಂ 2003, ದಿನಾಂಕ: 05.07.2004.
4. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 2 ಈಕಾಅ 2004 ದಿನಾಂಕ: 01.03.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 17.10.2001ರ ಆದೇಶದಲ್ಲಿ ಯೋಜನೆ ಮತ್ತು ಯೋಜನೇತರ ಅಡಿ ಖಾಲಿ ಇರುವ ಹುದ್ದೆಗಳನ್ನು ನೇರ ನೇಮಕಾತಿ ಅಥವಾ ಬಡ್ತಿ ಮೂಲಕ ಆರ್ಥಿಕ ಇಲಾಖೆಯ ಪೂರ್ವ ಸಹಮತಿಯೊಂದಿಗೆ ಮಾತ್ರ ತುಂಬುವಂತೆ ಸೂಚನೆ ನೀಡಲಾಗಿತ್ತು. ಮತ್ತು ಈ ರೀತಿ ಹುದ್ದೆಗಳನ್ನು ತುಂಬುವಾಗ ದಿನಾಂಕ: 01.04.2000ಕ್ಕೆ ಖಾಲಿ ಇರುವ ಹುದ್ದೆಗಳಲ್ಲಿ ಪ್ರತಿ ವೃಂದದಲ್ಲಿ ಶೇಕಡ 80ರಷ್ಟನ್ನು ತುಂಬದೇ ಹಾಗೆಯೇ ಖಾಲಿ ಇಡುವ ಬಗ್ಗೆ ಖಾತರಿಪಡಿಸಿಕೊಳ್ಳುವಂತೆ ತಿಳಿಸಲಾಗಿತ್ತು. 2000-2001ನೇ ಸಾಲಿನ ಆಯವ್ಯಯ ಭಾಷಣದ ಘೋಷಣೆಯ ಅನ್ವಯ ದಿನಾಂಕ: 01.04.2000ಕ್ಕೆ ಖಾಲಿ ಇರುವ ಹುದ್ದೆಗಳಲ್ಲಿ ಶೇಕಡ 80ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ವಿಷಯವನ್ನು ಪರಿಶೀಲಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ: 23.09.2003ರ ಸರ್ಕಾರದ ಆದೇಶದಲ್ಲಿ ಅಧಿಕಾರಯುತ ಸಮಿತಿಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ರಚಿಸಿರುತ್ತದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 05.07.2004ರ ಸರ್ಕಾರದ ಆದೇಶದಲ್ಲಿ ಖಾಲಿ ಇರುವ ಹುದ್ದೆಗಳನ್ನು ಬಡ್ತಿ ಮೂಲಕ ಮತ್ತು ನೇಮಕಾತಿ ಮೂಲಕ ತುಂಬುವ ಪೂರ್ವದಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆಯುವ ಬಗೆಗಿನ ಸೂಚನೆಗಳನ್ನು ಮತ್ತೆ ಮುಂದುವರಿಸಲಾಗಿದೆ. ಸದರಿ ಆದೇಶದಲ್ಲಿ ಹುದ್ದೆಗಳ ಸೃಜನೆ, ನೇಮಕಾತಿ ಮತ್ತು ಬಡ್ತಿಯ ಪ್ರಸ್ತಾವಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 2 ಈಕಾಅ 2004 ದಿನಾಂಕ: 01.03.2004ರಲ್ಲಿ ಸೂಚಿಸಿರುವಷ್ಟು ಪ್ರಮಾಣದ ಖಾಲಿ ಹುದ್ದೆಗಳನ್ನು ಇಲಾಖೆಗಳು ರದ್ದುಗೊಳಿಸದಿದ್ದ ಪಕ್ಷದಲ್ಲಿ ಪರಿಗಣಿಸಲಾಗುವುದಿಲ್ಲ ಎಂದು ಸಹ ತಿಳಿಸಲಾಗಿದೆ.

ಸರ್ಕಾರವು ಈ ಇಡೀ ವಿಷಯವನ್ನು ಪರಿಶೀಲಿಸಿದೆ ಮತ್ತು ಇಲಾಖೆಗಳಲ್ಲಿ ಬಡ್ತಿ ಹುದ್ದೆಗಳನ್ನು ತುಂಬುವುದಕ್ಕೆ ಸಂಬಂಧಿಸಿದಂತೆ ಆರ್ಥಿಕ ಮಿತವ್ಯಯ ಕ್ರಮಗಳನ್ನು ಸಡಿಲಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 1 ಬಿಇಎಂ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

1. ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಡ್ತಿ ಹುದ್ದೆಗಳನ್ನು ತುಂಬುವುದಕ್ಕೆ ಸಂಬಂಧಿಸಿದಂತೆ ಆರ್ಥಿಕ ಮಿತವ್ಯಯ ಕ್ರಮಗಳಿಂದ ಇಲಾಖೆಗಳಿಗೆ ವಿನಾಯಿತಿ ನೀಡಲು ಸರ್ಕಾರವು ಹರ್ಷಿಸುತ್ತದೆ.

    ಅ. ಅನಧಿಕೃತ ಟಿಪ್ಪಣಿ ಸಿಆಸುಇ 2 ಈಕಾಅ 2004 ದಿನಾಂಕ: 01.03.2004ರಲ್ಲಿ ತಿಳಿಸಿರುವಂತೆ ಅಧಿಕಾರಯುತ ಸಮಿತಿಯು ಶಿಫಾರಸ್ಸು ಮಾಡಿರುವ ದಿನಾಂಕ: 01.04.2000ರಲ್ಲಿರುವಂತೆ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಶೇಕಡ 20ರಷ್ಟು ಖಾಲಿ ಹುದ್ದೆಗಳು, ಪೊಲೀಸ್ ಮತ್ತು ಅರಣ್ಯ ಇಲಾಖೆಗಳಲ್ಲಿ ಶೇಕಡ 50ರಷ್ಟು ಖಾಲಿ ಹುದ್ದೆಗಳು ಮತ್ತು ಇತರ ಇಲಾಖೆಗಳಲ್ಲಿ ಶೇಕಡ 80ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸಲು ಕ್ರಮವನ್ನು ಕೈಗೊಂಡಿದ್ದಲ್ಲಿ;

    ಅಥವಾ

    ಆ. ಅಧಿಕಾರಯುತ ಸಮಿತಿಯಿಂದ ಹುದ್ದೆಗಳನ್ನು ರದ್ದುಮಾಡುವ ಪ್ರಕ್ರಿಯೆಯಿಂದ ವಿನಾಯಿತಿ ಪಡೆಯಲು ಕ್ರಮವನ್ನು ಕೈಗೊಂಡಿದ್ದಲ್ಲಿ.

ಆದಾಗ್ಯೂ ಅಧಿಕಾರಯುತ ಸಮಿತಿಗೆ ವಿನಾಯಿತಿಗಾಗಿ ಸಲ್ಲಿಸುವ ಪೂರ್ವದಲ್ಲಿ ಆರ್ಥಿಕ ಇಲಾಖೆಯ ಸ್ಪಷ್ಟ ಅಭಿಪ್ರಾಯವನ್ನು ಆಯಾ ಪ್ರಕರಣಗಳಲ್ಲಿ ತಪ್ಪದೇ ಪಡೆಯತಕ್ಕದ್ದು.

2. ಇಲಾಖೆಗಳು ಇಂತಹ ಹುದ್ದೆಗಳನ್ನು ರದ್ದುಗೊಳಿಸಲು ಆದೇಶಗಳನ್ನು ಹೊರಡಿಸಿದ್ದಲ್ಲಿ ಅಥವಾ ಅಧಿಕಾರಯುತ ಸಮಿತಿಯಿಂದ ಹುದ್ದೆಗಳನ್ನು ರದ್ದುಗೊಳಿಸಲು ವಿನಾಯಿತಿ ಪಡೆದು ತತ್ಪರಿಣಾಮವಾಗಿ ಸಿ.ಆ.ಸು. ಇಲಾಖೆ/ ಆಡಳಿತ ಇಲಾಖೆಗಳು ಆದೇಶ ಹೊರಡಿಸಿದ್ದಲ್ಲಿ ಇಂತಹ ಪ್ರಕರಣಗಳನ್ನು ಆರ್ಥಿಕ ಇಲಾಖೆಗೆ ಸಲ್ಲಿಸಬೇಕಾಗಿಲ್ಲ.
3. ಮೇಲೆ ತಿಳಿಸಿದಂತೆ ಹುದ್ದೆಗಳನ್ನು ರದ್ದು ಮಾಡುವ ಬಗ್ಗೆ ಅಥವಾ ಅಧಿಕಾರಯುತ ಸಮಿತಿಯಿಂದ ಹುದ್ದೆಗಳನ್ನು ರದ್ದುಗೊಳಿಸುವ ಪ್ರಕ್ರಿಯೆಯಿಂದ ವಿನಾಯಿತಿ ಪಡೆದಿದ್ದಲ್ಲಿ ಸಂಬಂಧಿಸಿದ ಆದೇಶಗಳೊಂದಿಗೆ ಆಡಳಿತ ಇಲಾಖೆಗಳು ಮುಂಚಿತವಾಗಿ ತಪ್ಪದೆ ಆರ್ಥಿಕ ಇಲಾಖೆಗೆ ಮಾಹಿತಿಯನ್ನು ನೀಡತಕ್ಕದ್ದು. ಇತರೇ ಪ್ರಕರಣಗಳಲ್ಲಿ ಆರ್ಥಿಕ ಇಲಾಖೆಯೊಂದಿಗೆ ತಪ್ಪದೇ ಸಮಾಲೋಚಿಸತಕ್ಕದ್ದು.
4. ಈ ಮೇಲ್ಕಂಡ ವಿನಾಯಿತಿಯು ಜಿಲ್ಲಾ ಪಂಚಾಯತ್‌ಗಳು, ಸಹಾಯಾನುದಾನ ಸಂಸ್ಥೆಗಳು, ನಗರ ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ವಲಯ ಉದ್ದಿಮೆಗಳು, ರಾಜ್ಯ ಸ್ವಾಯತ್ತ ಸಂಸ್ಥೆಗಳು ಮತ್ತು ನಿಗಮಗಳಿಗೆ ಅನ್ವಯವಾಗುವುದಿಲ್ಲ. ಆದೇಶ ಸಂಖ್ಯೆ: ಆಇ 2 ಬಿಇಎಂ 2003 ದಿನಾಂಕ: 05.07.2004ರಲ್ಲಿ ಹೊರಡಿಸಲಾದ ಸೂಚನೆಗಳು ಇಂತಹ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಈಗಲೂ ಜಾರಿಯಲ್ಲಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶಾಮರಾವ್**

ಪಿ.ಆರ್. 939

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಎಫ್.ಆರ್. ಮತ್ತು ಬಿ.ಸಿ.ಸಿ.).

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಕಂಇ 78 ಮುಆಬಿ 2004, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಸರ್ಕಾರದ ಆದೇಶ ಸಂಖ್ಯೆ: ಕಂಇ 78 ಮುಆಬಿ 2004 ದಿನಾಂಕ: 16.06.2005ರಲ್ಲಿ ಪುಟ 2ರಲ್ಲಿ ಕೊನೆಯ ಸಾಲಿನ ಮೇಲಿನ ಸಾಲಿನಲ್ಲಿ ಶ್ರೀ ಭಕ್ರೇದೇವರು ಎಂಬುವುದನ್ನು **"ಭಕ್ರೇ ದುರ್ಗಾದೇವರ ದೇವಸ್ಥಾನ"** ಎಂದು ತಿದ್ದಿಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಜಯಚಂದ್ರ**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 941

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಬಾಲಕೃಷ್ಣ ಅಡಿಗ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರನ್ನು ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಸಹಾಯಕ ಇಂಜಿನಿಯರ್ ಆಗಿ ವರ್ಗಾಯಿಸಿ ನೇಮಿಸಿರುವುದಕ್ಕೆ ತಾತ್ಕಾಲಿಕವಾಗಿ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆರವರ ಪತ್ರ ಸಂಖ್ಯೆ: ಇಎಸ್‌ಟಿ(2) ಸಿಆರ್: 132: 2002-03, ದಿನಾಂಕ: 24.10.2002, 24.02.2003, 27.06.2003, ಮತ್ತು 01.07.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 81 ಎಂಎಂಸಿ 2002, ದಿನಾಂಕ: 07.09.2002ರಂತೆ ಶ್ರೀ ಬಾಲಕೃಷ್ಣ ಅಡಿಗ ಬಿ. ಸಹಾಯಕ ಇಂಜಿನಿಯರ್, ಇವರನ್ನು ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಮಂಗಳೂರು ಮಹಾನಗರ ಪಾಲಿಕೆಗೆ ವರ್ಗಾಯಿಸಿ ನೇಮಿಸಲಾಗಿತ್ತು. ಆದರೆ ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಸಹಾಯಕ ಇಂಜಿನಿಯರ್ ಮಂಜೂರಾದ ಹುದ್ದೆ ಕೇವಲ ಒಂದು ಮಾತ್ರ ಇದ್ದು, ಸದರಿ ಹುದ್ದೆಯು ಖಾಲಿ ಇಲ್ಲದೆ ಇರುವ ಹಿನ್ನೆಲೆಯಲ್ಲಿ ಒಂದು ಕಿರಿಯ ಇಂಜಿನಿಯರ್ ಹುದ್ದೆ ಖಾಲಿ ಇದ್ದುದರಿಂದ ಮಹಾನಗರ ಪಾಲಿಕೆಯ ಆಡಳಿತ ಮತ್ತು ದೈನಂದಿನ ಕೆಲಸ ಕಾರ್ಯಗಳ ಹಿತದೃಷ್ಟಿಯಿಂದ ಕಿರಿಯ ಇಂಜಿನಿಯರ್ ಹುದ್ದೆಯ ಕೆಲಸವನ್ನು ನಿರ್ವಹಿಸಲು ಸರ್ಕಾರದ ಘಟನೋತ್ತರ ಮಂಜೂರಾತಿಯನ್ನು ನಿರೀಕ್ಷಿಸಿ ಪಾಲಿಕೆಯು ಶ್ರೀ ಬಾಲಕೃಷ್ಣ ಅಡಿಗ ಬಿ. ಸಹಾಯಕ ಇಂಜಿನಿಯರ್ ಇವರನ್ನು ಮಂಗಳೂರು ಮಹಾನಗರ ಪಾಲಿಕೆಯಲ್ಲಿ ದಿನಾಂಕ: 18.09.2002ರಂದು ನಿಯೋಜಿಸಿಕೊಳ್ಳಲಾಗಿತ್ತೆಂದು ತಿಳಿಸಿರುತ್ತಾರೆ.

ಮುಂದುವರೆಯುತ್ತಾ, ಸಹಾಯಕ ಇಂಜಿನಿಯರ್ ಹುದ್ದೆ ಖಾಲಿ ಇಲ್ಲದೆ ಇದ್ದುದರಿಂದ ಖಾಲಿ ಇದ್ದ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ನಿಯೋಜಿಸಿಕೊಂಡಿರುವುದಕ್ಕೆ ದಿನಾಂಕ: 18.09.2002ರಿಂದ ಅನ್ವಯವಾಗುವಂತೆ ಘಟನೋತ್ತರ ಮಂಜೂರಾತಿಯನ್ನು ಪಾಲಿಕೆಯ ಆಯುಕ್ತರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 81 ಎಂಎಂಸಿ 2002, ಬೆಂಗಳೂರು, ದಿನಾಂಕ: 29ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಕಿರಿಯ ಇಂಜಿನಿಯರ್ ಹುದ್ದೆಯನ್ನು ಅಧಿಸೂಚನೆ ಸಂಖ್ಯೆ: ನಅಇ 81 ಎಂಎಂಸಿ 2002, ದಿನಾಂಕ:07.09.2002ರನ್ವಯ ಶ್ರೀ ಬಾಲಕೃಷ್ಣ ಅಡಿಗ ಅವರು ದಿನಾಂಕ: 18.09.2002 ರಿಂದ ಸಹಾಯಕ ಇಂಜಿನಿಯರ್ ಆಗಿ ಕರ್ತವ್ಯ ನಿರ್ವಹಿಸಿರುವ ಅವಧಿಯವರೆಗೆ ಮಾತ್ರ ತಾತ್ಕಾಲಿಕವಾಗಿ ಆ ಹುದ್ದೆಯನ್ನು ಉನ್ನತೀಕರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 548 ವೆ-9:2004 ದಿನಾಂಕ: 13.05.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜೆ. ಸಂಪತ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 942

## ENERGY SECRETARIAT

**Sub:** Power Trading-Establishing of State Power Procurement Coordination Centre-reg.

**Preamble:**

In terms of Section 39(1) of the Electricity Act, 2003, the State Transmission Utility is barred from trading electricity with effect from 10th June 2005. Inpursuance thereof the Government vide its Order No. EN 131 PSR 2003 dated: 10.05.2005 has accorded approval among things to establish a State Power Procurement Coordination Centre (SPPCC) to co-ordinate the procurement of power from different sources and allocation of power between ESCOMs and to supervise functioning of the State Load Dispatch Centre. The order provides for deputation of required staff from KPTCL for a period of one year to manage the day-to-day affairs of the SPPCC.

Hence, the following order.

**Government Order No. EN 131 PSR 2003, Bangalore, Dated: 30th June, 2005**

The SPPCC shall have the following staff to be drawn on deputation from KPTCL.

| | | |
|---|---|---|
| Director (Procurement) | 1 | to be filled by an Officer of the rank of Chief Engineer Electricity. |
| Superintending Engineer Electricity | 1 | from EBC & BBPC., LDC, KPTCL |
| Controller | 1 | from EBC & BBPC., LDC, KPTCL |
| Executive Engineer Electricity | 1 | from EBC & BBPC., LDC, KPTCL |
| Assistant Executive Engineer Electricity | 2 | from EBC & BBPC., LDC, KPTCL |
| Accounts Officer | 1 | from EBC & BBPC., LDC, KPTCL |
| Assistant Executive Engineer Electricity | 2 | from Corporate Office, KPTCL. |

The Director (Procurement) shall report to the Principal Secretary to Government, Energy Department.

The establishment and administrative expenditure towards the centre shall be met by the ESCOMs.

By Order and in the name of the Governor of Karnataka,

**SURESH B. KRISHNAPPANAVAR**

PR-943

Under Secretary to Government,

Energy Department.

**INFRASTRUCTURE DEVELOPMENT SECRETARIAT**

**Sub:** III$^{rd}$ and Final installment of Advisory Services Fee to iDeCK for evaluation of cost escalation of Bangalore International Airport Project.

**Read:** 1. G.O. No. IDD 3 DIA 2005, Dated: 28.03.2005.

2. G.O. No. IDD 47 NSW 2004, Dated: 29.03.2005.

3. Letter No. iDeCK/ 2004-05/ 138 Dated: 25.05.2005 of iDeCK.

**Preamble:**

1. In Government Order Dated: 28.03.2005 at Sl.No. 1, a sum of Rs.4,75,000-00 (Rupees Four Lakhs Seventy Five Thousand only) was released to iDeCk, being the 50% of the fees for providing advisory services for evaluation of the cost of escalation of Bangalore International Airport Project. Later in G.O. Dated: 29.03.2005 read at Sl.No. 2 above, an amount of Rs. 2.00.000-00 (Rupees Two Lakhs only) was released from the funds available in the Head of Account 3451-00-090-1-06-125 Secretariat Economic Services-Infrastructure Preliminary Studies-other Expenditure-Modernisation (Plan) 2004-05.

2. Now iDeCK in their letter Dated: 25.05.2005 read at Sl.No. 3 have requested to release the balance payment of Rs.2,75,000-00 (Rupees Two Lakhs Seventy five Lakhs only) towards the cost escalation study undertaken for Bangalore International Airport Project.

3. Hence to facilitate release of the balance amount of Rs. 2,75,000-00 (Rupees Two Lakhs Seventy Five Thousand only) i.e. III$^{rd}$ and final installment (inclusive of Service Tax) towards the fees for cost of escalation study for Bangalore International Airport Project. This order is issued.

**Government Order No. IDD 36 DIA 2005, Bangalore, Dated: 28th June, 2005**

After careful examination, Government are pleased to release an amount of Rs.2,75,000-00 (Rupees Two Lakhs Seventy Five Thousand only) being the fees (inclusive of Service Tax) towards the III$^{rd}$ and Final installment of the fees to iDeCK for evaluation of cost escalation of Bangalore International Airport Project.

2. This cost would be met out funds under the Head 3451-00-090-1-06-125- Infrastructure-Preliminary Studies- Modernisation (Plan) 2005-06.

3. The Chief Finance Officer (CFO) of iDeCK would draw this amount on a payees receipt duly countersigned by the Under Secretary, Infrastructure Development Department.

4. This Order issues in accordance with Finance Department's G.O. No. FD 1 TFP 2003 Dated: 12.06.2003.

By Order and in the name of the Governor of Karnataka,

**T.B. RENUKAPRASAD**

PR-944

Under Secretary to Government,

Infrastructure Development Department.